# ಸಿದ್ಧಗಂಗಾ



ಸೆಪ್ಟೆಂಬರ್, 1976

# ಶ್ರೀ ಸಿದ್ಧಗಂಗಾ ಮಠ

## ಅನ್ನದಾನ ಮತ್ತು ವಿದ್ಯಾದಾನ ಮಹಾ ಕೇಂದ್ರವಾಗಿ ಭಾರತದಲ್ಲಿ ಪ್ರಖ್ಯಾತಿಗಳಿಸಿದೆ.

ಮಹಾಮಹಿಮರಾದ ಶ್ರೀ ಸಿದ್ಧಲಿಂಗೇಶ್ವರರು ತಪಸ್ಸು ಮಾಡಿ ಗಂಗೋದ್ಭವ ಮಾಡಿದ ಪುಣ್ಯಕ್ಷೇತ್ರ.

ದಿನ ನಿತ್ಯ ಸಹಸ್ರಾರು ಯಾತ್ರಿಕರು ಶ್ರೀ ಕ್ಷೇತ್ರವನ್ನು ಸಂದರ್ಶಿಸಿ ಇಲ್ಲಿನ ಅದ್ಭುತ ಕಾರ್ಯಸಾಧನೆ ಮೆಚ್ಚಿ ಶ್ರೀ ಶ್ರೀಗಳವರ ಜೀವನ ದರ್ಶನವನ್ನು ನೋಡಿ ಕೃತಾರ್ಥರಾಗುತ್ತಿದ್ದಾರೆ.

ಈಗ 3,500 ಕ್ಕೂ ಮೇಲ್ಪಟ್ಟ ಎಲ್ಲ ಕೋಮುಗಳ ವಿದ್ಯಾರ್ಥಿಗಳು ಉಚಿತ ಪ್ರಸಾದ ಮತ್ತು ವಸತಿ ಸೌಲಭ್ಯ ಪಡೆಯುತ್ತಿದ್ದಾರೆ.

ಗ್ರಾಮೀಣ ಜನತೆಗೆ ವಿದ್ಯಾಪ್ರಸಾರಕ್ಕಾಗಿ ನಾಡಿನಾದ್ಯಂತ 40 ಕ್ಕೆ ಮೇಲ್ಪಟ್ಟ ಶಾಲಾ ಕಾಲೇಜುಗಳನ್ನು ಸ್ಥಾಪಿಸಲಾಗಿದೆ.

ಇಂಥಹ ಅಪೂರ್ವವಾದ ಪುಣ್ಯಕಾರ್ಯ ನಿರಂತರವಾಗಿ ಅವಿಚ್ಛಿನ್ನವಾಗಿ ಮುಂದುವರಿಯಲು ನಾಡಿನಾದ್ಯಂತ ಲಕ್ಷಗಟ್ಟಲೆ ಅಭಿಮಾನಿಗಳು ತನುಮನಧನಗಳ ಮೂಲಕ ಪ್ರೋತ್ಸಾಹ ಕೊಡುತ್ತಿದ್ದಾರೆ. ಎಲ್ಲರಿಗೂ ಕೃತಜ್ಞತೆಯನ್ನು ಸಮರ್ಪಿಸುತ್ತೇವೆ. ನಿಮ್ಮ ಕೊಡುಗೆಯನ್ನು ಎಂ.ಒ, ಅಥವಾ ಚೆಕ್ ಮೂಲಕ ಶ್ರೀ ಸನ್ನಿಧಿಗೆ ಕಳುಹಿಸಿ.

**ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು**

ಶ್ರೀ ಸಿದ್ಧಗಂಗಾ ಮಠ-(572131) ತುಮಕೂರು ಜಿಲ್ಲೆ.

ಇತಿ ಭಕ್ತಮಂಡಲಿ.

---

**'ಸಿದ್ಧಗಂಗಾ' ಮಾಸ ಪತ್ರಿಕೆ,**

ನಿರಂತರವಾಗಿ ನಿಮಗೆ ತಲುಪಲು ಆಜೀವ ಸದಸ್ಯತ್ವ ಪಡೆಯಿರಿ.
'ಸಿದ್ಧಗಂಗಾ' ಆಜೀವ ಸದಸ್ಯರ ಬಳಗಕ್ಕೆ ಸೇರಿರಿ.
ಆಜೀವ ಸದಸ್ಯತ್ವ ಚಂದಾ: 101- 00ರೂಗಳು.
ಚಂದಾವನ್ನು ಎಂ. ಒ, ಚೆಕ್ ಅಥವಾ ಡ್ರಾಫ್ಟ್ ಮೂಲಕ ಕಳುಹಿಸಿ.

ಪ್ರಕಾಶಕರು,
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ—572131 ತುಮಕೂರು ಜಿಲ್ಲೆ.


# 'ಸಿದ್ಧಗಂಗಾ'

ಸೆಪ್ಟೆಂಬರ್, ೧೯೭೬

ಸಂಪುಟ-೧೨ ಸಂಚಿಕೆ-೯


ಮುಖ ಪುಟ

ನಿರ್ವಿಘ್ನದಿಂ ತಮ್ಮ ಕಾರ್ಯಗಳು ಮುಗಿಯಲೆಂದು।
ಸರ್ವರೂ ಭಜಿಪರು ಗಜಮುಖನನಾದಿಯಲಿ ಸಂದು॥


ಪ್ರಕಾಶಕರು
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ
ಹೆಚ್. ಬಿ. ಗಂಗಾಧರಯ್ಯ

ಸಂಪಾದಕರು
ಪಂ॥ ಚನ್ನಪ್ಪ ಎರೇಸೀಮೆ
ಕೆ. ಜಿ. ರಂಗಯ್ಯ

ಜಾಹೀರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಹಂಚಿಕೆಯ ವ್ಯವಸ್ಥಾಪಕರು
ಎಸ್. ಗಂಗರುದ್ರಪ್ಪ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟನೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ವಾರ್ಷಿಕ ಚಂದಾ: 10 ರೂ
ಆಜೀವ ಸದಸ್ಯತ್ವ: 101 ರೂ




# ಶ್ರೀವಾಣಿ

ಪರಮಾತ್ಮನ ಸೃಷ್ಟಿಯಲ್ಲಿ ಯಾವ ಮೇಲ್ಮೆ, ಶಕ್ತಿ ಉಂಟು ನೋಡಿ. ಇದನ್ನು ವಿಮರ್ಶಿಸುವವರು ಯಾರು ? ರಾಗಿ ಕಾಳನ್ನು ಬಿತ್ತುತ್ತಾರೆ. ಮಳೆ ಬರುತ್ತದೆ. ಪೈರು ಬೆಳೆಯುತ್ತದೆ. ಒಂದು ಪೈರು ಹತ್ತು ತೆಂಡೆಯಾಗಿ, ನೂರಾರು ತೆನೆಯಾಗಿ, ಒಂದೊಂದು ತೆನೆಯೂ ಸಹಸ್ರಾರು ಕಾಳಾಗುತ್ತದೆ! ಈ ಶಕ್ತಿ ಎಲ್ಲಿಂದ ಬಂದಿತು? ಈ ಶಕ್ತಿಯನ್ನು ಕೊಟ್ಟವರು ಯಾರು ? ದೇವ ಸೃಷ್ಟಿಯ ಮೂಲ ಅಷ್ಟು ಸುಲಭವಾಗಿ ಅರ್ಥವಾಗದು. ಸೂರ್ಯ ಹುಟ್ಟುತ್ತಾನೆ, ಮುಳುಗುತ್ತಾನೆ. ಅವನು ಎಲ್ಲಿಂದ ಬಂದ? ಸೂರ್ಯ ಚಾಚೂ ತಪ್ಪದೆ ನಿಯಮ ಅನುಸರಿಸುತ್ತಾನೆ. ಸೃಷ್ಟಿ ಆಶ್ಚರ್ಯಮಯ. ಅನೇಕ ಅದ್ಭುತ ಘಟನೆಗಳು ನಡೆಯುತ್ತವೆ. ಇಂತಹ ಆಶ್ಚರ್ಯ, ಅದ್ಭುತ ಘಟನೆ ಹಾಗೂ ಕ್ರಮಬದ್ಧ ಜೀವನವನ್ನು ಸೃಷ್ಟಿಯಲ್ಲಿ ನಿರ್ಮಿಸಿದವನಾರು? ಎಲ್ಲವೂ ಕ್ರಮ ತಪ್ಪದೆ, ನಿಯಮ ತಪ್ಪದೆ ಯಜಮಾನನ ಅಪ್ಪಣೆಯಂತೆ ಸಾಗುತ್ತದೆ. ಅವನ ಅಪ್ಪಣೆ ಮೀರಿದರೆ ಅವ್ಯವಸ್ಥೆ, ಅರಾಜಕತ್ವ, ಅಂಧಕಾರ. ವಿಶ್ವದ ವ್ಯಾಪಾರ ಕೊಂಚವೂ ಬದಲಾವಣೆ ಇಲ್ಲದೆ ಕ್ರಮವಾಗಿ, ನ್ಯಾಯವಾಗಿ ಸಾಗುತ್ತಿರುತ್ತದೆ. ಇದು ಯಾವನ ಆಜ್ಞೆ? ಇದರ ಕರ್ತೃಯಾರು? ನಿಯಾಮಕ ಯಾರು? ಒಂದು ಚೈತನ್ಯ ಇದರ ಹಿಂದೆ ನಿಂತಿದೆ ಎಂಬುದಂತೂ ಸ್ಪಷ್ಟವಾಗುತ್ತದೆ. ಆ ವಿಶ್ವ ಚೈತನ್ಯ ಶಕ್ತಿಯೇ ಪರಮಾತ್ಮ.

ಅವನ ಅಪ್ಪಣೆಯಿಂದ ವಾಯು ಚಲಿಸುತ್ತದೆ. ಜಗತ್ತಿನ ಪ್ರತಿ ವ್ಯಾಪಾರವೂ ನಡೆಯುತ್ತದೆ. ಇಂತಹ ವಿಶ್ವ ವ್ಯಾಪಾರದ ಮೂಲಶಕ್ತಿಯೇ ಭಗವಂತ. ಭಗವಂತನಲ್ಲಿ ನಂಬಿಕೆ ಹಾರಿತೋ ಜೀವನ ನೀರಸ, ಕಷ್ಟಮಯ, ಅರ್ಥಹೀನ. ಪರಮಾತ್ಮನ ಅಗಾಧ ಶಕ್ತಿ ಸೃಷ್ಟಿಯಲ್ಲಿ ಗೋಚರವಾಗುತ್ತದೆ. ಅಂತಹ ಸೃಷ್ಟಿಯನ್ನು ಅರ್ಥ ಮಾಡಿಕೊಳ್ಳುವುದು ಅಷ್ಟು ಸುಲಭವಲ್ಲ. ಪ್ರಾಯಶಃ ಮನುಷ್ಯನ ಯೋಚನಾ ಶಕ್ತಿಯನ್ನು ಮೀರಿರುವುದು. ತೀವ್ರ ಪ್ರಯತ್ನ ಮತ್ತು ಸಾಧನೆಯಿಂದ ಮಾತ್ರ ವಿಶ್ವ ರಹಸ್ಯವನ್ನು ಅರಿಯಲು ಸಾಧ್ಯ.

—

## ಪರಿವಿಡಿ



## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಮಾಸ ಪತ್ರಿಕೆಯು ಲೇಖಕರಿಂದ ವಿಚಾರ ಪ್ರಚೋದಕವಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಧರ್ಮ, ಸಂಸ್ಕೃತಿ, ಸಾಮಾಜಿಕ, ಐತಿಹಾಸಿಕ ಹಾಗೂ ಸ್ಥಳ ಮಹಾತ್ಮೆಗಳಿಗೆ ಸಂಬಂಧಿಸಿದವುಗಳಾದರೆ ಹೆಚ್ಚು ಆದ್ಯತೆ ನೀಡಲಾಗುವುದು. ಪ್ರಚಲಿತ ಸಾಮಾಜಿಕ ಜೀವನದ ಸಮಸ್ಯೆಗಳನ್ನು ಬಿಂಬಿಸುವ ಹಾಗೂ ಅವುಗಳಿಗೆ ಪರಿಹಾರ ಸೂಚಿಸುವ ಸಣ್ಣಕಥೆ, ಕವನ ಮತ್ತು ಪ್ರಬಂಧಗಳಿಗೂ ಸ್ವಾಗತವುಂಟು. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿರಬೇಕು. ಸ್ವೀಕೃತವಾದ ಲೇಖನಗಳಿಗೆ "ಸಿದ್ಧಗಂಗಾ" ಆಗಿಂದಾಗ್ಗೆ ನಿಗದಿ ಮಾಡಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಅಸ್ವೀಕೃತ ಲೇಖನಗಳನ್ನು ಹಿಂತಿರುಗಿಸಲಾಗುವುದಿಲ್ಲ ಪ್ರಯುಕ್ತ ಹಸ್ತ ಪ್ರತಿಯ ನಕಲನ್ನು ಕಾದಿರಿಸಿಕೊಳ್ಳುವುದು ಸೂಕ್ತ. ಲೇಖನಗಳನ್ನು ಸ್ಫುಟವಾಗಿ ಕಾಗದದ ಒಂದೇ ಮಗ್ಗುಲಲ್ಲಿ ಬರೆದು

"ಸಂಪಾದಕರು"
'ಸಿದ್ಧಗಂಗಾ' [ಕನ್ನಡ ಮಾಸಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ -572131
ತುಮಕೂರು ಜಿಲ್ಲೆ

ಇವರಿಗೆ ಕಳುಹಿಸಿ ಕೊಡಬೇಕಾಗಿ ವಿನಂತಿ.





ಮಹಾ ಮಾನವತಾವಾದಿ

# ಡಾ|| ಎಸ್. ರಾಧಾಕೃಷ್ಣನ್


— ಎಸ್. ಚನ್ನಪ್ಪ.


ವಿಶ್ವ ವೇದಾಂತಿ, ದಾರ್ಶನಿಕ, ಶಿಕ್ಷಣ ತಜ್ಞ, ರಾಜಕೀಯ ಮುತ್ಸದ್ದಿ, ಆಚಾರ್ಯ, ಕುಲಪತಿ-ಎಂದೆಲ್ಲಾ ಖ್ಯಾತಿಗೊಂಡು, ಮಹಾಮಾನವತಾವಾದಿಯಾಗಿ ಸುಮಾರು 86 ವರ್ಷಗಳ ಕಾಲ ತುಂಬು ಬದುಕನ್ನು, ಭಾರತದ ಭವ್ಯ ಪರಂಪರೆಯ ಬದುಕನ್ನು ನಡೆಸಿ ನಿರ್ಗಮಿಸಿದ ಸರ್ವೆಪಲ್ಲಿ ರಾಧಾಕೃಷ್ಣನ್ (1888-1975) ಅವರದು. ಪ್ರಾಚೀನ-ಅರ್ವಾಚೀನಗಳ ಸಂಗಮವಾಗಿದ್ದ ವ್ಯಕ್ತಿತ್ವ.

ರಾಧಾಕೃಷ್ಣನ್ ಜನಿಸಿದ್ದು ಆಂಧ್ರ ಪ್ರದೇಶದ ತಿರುತ್ತಣಿ ಎಂಬ ಹಳ್ಳಿಯಲ್ಲಿ; ಶ್ರೀ ಸಾಮಾನ್ಯ ಕುಟುಂಬದಲ್ಲಿ. ಸರ್ವೆಪಲ್ಲಿ ಮನೆತನದ ಹೆಸರು. ತಿರುತ್ತಣಿ ಒಂದು ಯಾತ್ರಾಸ್ಥಳ. ಮನೆಯಲ್ಲಿ ಧಾರ್ಮಿಕ ವಾತಾವರಣ. ಹೀಗಾಗಿ ರಾಧಾಕೃಷ್ಣನ್‌ರಿಗೆ ಬಾಲ್ಯದಲ್ಲಿಯೇ ದೇವರಲ್ಲಿ ಭಕ್ತಿ-ನಂಬಿಕೆಗಳುಂಟಾದುವು. ಕ್ರಮೇಣ ಅವರ ಮನಸ್ಸು ಧರ್ಮದ ಕಡೆ ಹರಿಯಿತು. ಇದಕ್ಕೆ ಪೂರಕವಾಗುವಂತೆ ಅವರ ವ್ಯಾಸಂಗವೂ ನಡೆಯಿತು. ತಿರುತ್ತಣಿಯಲ್ಲಿ ಆರಂಭದ ವ್ಯಾಸಂಗವನ್ನು ಮುಗಿಸಿದ ಅವರು, ತಿರುಪತಿ, ವೆಲ್ಲೂರು ಮತ್ತು ಮದರಾಸುಗಳಲ್ಲಿ ವ್ಯಾಸಂಗವನ್ನು ಮಾಡಿದರು. ತಮ್ಮ ಹದಿನೇಳನೇ ವಯಸ್ಸಿನಲ್ಲಿ ಎಫ್. ಎ. ಪರೀಕ್ಷೆಯಲ್ಲಿ ತೇರ್ಗಡೆಯಾದ ರಾಧಾಕೃಷ್ಣನ್, ತಮ್ಮ ಇಪ್ಪತ್ತನೆಯ ವಯಸ್ಸಿನಲ್ಲಿ ಎಂ. ಎ., ಪದವೀಧರರಾದರು. ಎಂ. ಎ., ಪದವಿಗಾಗಿ ಇವರು ಬರೆದಿದ್ದ 'ಎಥಿಕ್ಸ್ ಆಫ್ ದಿ ವೇದಾಂತ' ಎಂಬ ಪ್ರೌಢ ಪ್ರಬಂಧ ಇವರ ಪ್ರಾಧ್ಯಾಪಕರುಗಳ ವಿಶೇಷ ಮನ್ನಣೆಗೆ ಪಾತ್ರವಾಯಿತಲ್ಲದೆ ಉನ್ನತ ಶ್ರೇಣಿಯ ಎಂ. ಎ., ಪದವಿಯನ್ನು ದೊರಕಿಸಿ ಕೊಟ್ಟಿತು. ರಾಧಾಕೃಷ್ಣನ್‌ರ ವ್ಯಾಸಂಗವೆಲ್ಲಾ ಕ್ರೈಸ್ತಧರ್ಮ ಶಾಲಾ-ಕಾಲೇಜು ಗಳಲ್ಲಿ ನಡೆಯಿತು. ಹೀಗಾಗಿ ಹಿಂದೂ ಧರ್ಮದ ಜತೆಗೆ, ಇತರ ಧರ್ಮಗಳನ್ನು ತಿಳಿಯುವ ಅವಕಾಶ ಅವರಿಗೆ ಒದಗಿತು. ಇದರಿಂದ ಧರ್ಮಗಳನ್ನು ಕುರಿತು, ಅವುಗಳಲ್ಲಿರುವ ನಂಬಿಕೆಗಳನ್ನು ಕುರಿತು ವ್ಯಾಪಕವಾಗಿ ಚಿಂತಿಸಲು ಅವರಿಗೆ ಸಾಧ್ಯವಾಯಿತು.

ರಾಧಾಕೃಷ್ಣನ್ ತತ್ವ ಶಾಸ್ತ್ರಕ್ಕೆ ಒಲಿದಿದ್ದು ಆಕಸ್ಮಿಕ. ಅವರ ಸಮೀಪದ ಬಂಧುಗಳೊಬ್ಬರು ತತ್ವ ಶಾಸ್ತ್ರದಲ್ಲಿ ಬಿ. ಎ. ಪದವಿ ಪಡೆದಿದ್ದರು. ಅವರು ಸಂಗ್ರಹಿಸಿದ್ದ ತತ್ವಶಾಸ್ತ್ರ ಗ್ರಂಥಗಳನ್ನು ರಾಧಾಕೃಷ್ಣನ್ ಕುತೂಹಲಕ್ಕಾಗಿ ಓದಿದರು. ಇದರಿಂದಾಗಿ ಅವರು ತತ್ವಶಾಸ್ತ್ರಕ್ಕೆ ಒಲಿದರು. ತಮ್ಮ ಆಸಕ್ತಿಯ ಈ ಕ್ಷೇತ್ರದಲ್ಲಿ ಅನಂತರ ಅವರು ನಡೆಸಿದ ಕೃಷಿಯಿಂದ "ವಿಶ್ವವೇದಾಂತಿ" ಎಂದು ಪ್ರಸಿದ್ಧರಾದರು.

ರಾಧಾಕೃಷ್ಣನ್ ಸ್ವಭಾವತಃ ಏಕಾಂತ ಪ್ರಿಯರು. ಓದು, ಚಿಂತನ, ಮನನಗಳೇ ಅವರ ದಿನನಿತ್ಯದ ಕೆಲಸವಾಗಿತ್ತು. ಹೀಗಾಗಿ ಅವರು ಸಹಜವಾಗಿಯೇ ಶಿಕ್ಷಣ ಕ್ಷೇತ್ರಕ್ಕೆ ಒಲಿದರು. ಅಧ್ಯಾಪಕ ವೃತ್ತಿಗಾಗಿ ಎಲ್. ಟಿ. ಪದವಿ ಪಡೆದ ರಾಧಾಕೃಷ್ಣನ್ ಅವರು ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ತತ್ವಶಾಸ್ತ್ರದ ಅಧ್ಯಾಪಕರಾಗಿ ತಮ್ಮ ವೃತ್ತಿ ಜೀವನವನ್ನು ಆರಂಭಿಸಿದರು. ಬೋಧನೆಯನ್ನು ಒಂದು ವ್ರತವನ್ನಾಗಿ ನಡೆಸಿದ ರಾಧಾಕೃಷ್ಣನ್, ತಮ್ಮ ಆಳವಾದ ಸಾಹಿತ್ಯದಿಂದ, ಉದಾತ್ತ ನಡವಳಿಕೆಯಿಂದ, ಅನುಪಮ ವ್ಯಕ್ತಿತ್ವದಿಂದ ವಿದ್ಯಾರ್ಥಿ ಪ್ರಪಂಚದಲ್ಲಿ ಬಹು

ಬೇಗ ಜನಪ್ರಿಯರಾದರು.

ರಾಧಾಕೃಷ್ಣನ್ ಅವರ ಜೀವನ ಆಳ, ವಿಶಾಲ ಮತ್ತು ವೈವಿಧ್ಯಮಯವಾದುದು. ರಾಜಮಂಡ್ರಿಯ ಸರಕಾರಿ ಕಾಲೇಜು, ಮೈಸೂರು ಮಹಾರಾಜ ಕಾಲೇಜು ಮತ್ತು ಕಲ್ಕತ್ತ ವಿಶ್ವವಿದ್ಯಾಲಯಗಳಲ್ಲಿ ಪ್ರಾಧ್ಯಾಪಕರಾಗಿ ನೂರಾರು ವಿದಾರ್ಥಿಗಳಿಗೆ ಜ್ಞಾನ ದಾನ ಮಾಡಿ 'ಆಚಾರ್ಯ' ಎಂದು ಹೆಸರಾದರು. ವಿದೇಶಗಳಿಗೆ ಹೋಗುವುದು ಕಲಿಯುವುದಕ್ಕೆ ಎಂಬುದು ನಮ್ಮಲ್ಲಿರುವ ಒಂದು ಸಾಮಾನ್ಯ ಅಭಿಪ್ರಾಯ. ಆದರೆ ರಾಧಾಕೃಷ್ಣನ್‌ರು ಇದಕ್ಕೆ ಅಪವಾದ. ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ಪಾಠ ಹೇಳಿದ್ದು ರಾಧಾಕೃಷ್ಣನ್‌ರ ಹೆಚ್ಚುಗಾರಿಕೆ. ಆಂಧ್ರ ವಿಶ್ವವಿದ್ಯಾಲಯ, ಬನಾರಸಿನ ಹಿಂದೂ ವಿದ್ಯಾಲಯ ಮತ್ತು ದೆಹಲಿ ವಿಶ್ವವಿದ್ಯಾಲಯಗಳ ಕುಲಪತಿಗಳಾಗಿಯೂ ಕೆಲಸ ಮಾಡಿದರು. ರಾಧಾಕೃಷ್ಣನ್‌ರು ಶಿಕ್ಷಣ ಕ್ಷೇತ್ರದಲ್ಲಿ ಹೀಗೆ ಸುಮಾರು ನಲವತ್ತು ವರ್ಷಗಳ ಕಾಲ ದುಡಿದು 'ಶಿಕ್ಷಣ ತಜ್ಞ' ರೆಂದು ಪ್ರಸಿದ್ಧರಾದರು.

ರಾಧಾಕೃಷ್ಣನ್‌ರ ಬದುಕಿನಲ್ಲಿ ಶಿಕ್ಷಣ ಕ್ಷೇತ್ರ ಒಂದು ಭಾಗವಾದರೆ, ರಾಜಕೀಯ ಕ್ಷೇತ್ರ ಇನ್ನೊಂದು ಭಾಗ. ರಾಜಕೀಯ ಕ್ಷೇತ್ರವನ್ನು ಅವರು ತಡವಾಗಿ ಪ್ರವೇಶಿಸಿದರೂ ಆ ಕ್ಷೇತ್ರದಲ್ಲೂ ಔನ್ನತ್ಯವನ್ನು ಪಡೆದರು. ಭಾರತದ ರಾಜ್ಯಾಂಗ ರಚನೆಯ ಸದಸ್ಯರಾಗಿ ರಾಜಕೀಯ ಕ್ಷೇತ್ರಕ್ಕೆ ಕಾಲಿಟ್ಟ ರಾಧಾಕೃಷ್ಣನ್‌ರು ಅನಂತರ ರಷ್ಯದಲ್ಲಿ ಭಾರತದ ರಾಯಭಾರಿಯಾಗಿದ್ದರು (1949-1952). ಭಾರತದ ಪ್ರಥಮ ಉಪರಾಷ್ಟ್ರಪತಿಯಾಗಿದ್ದ ರಾಧಾಕೃಷ್ಣನ್ ಹತ್ತು ವರ್ಷಗಳ ಕಾಲ ಆ ಹುದ್ದೆಯಲ್ಲಿದ್ದರು (1952-1962). ಅನಂತರ ರಾಷ್ಟ್ರಪತಿಯಾಗಿ ಐದು ವರ್ಷಗಳ ಕಾಲ ಆ ಹುದೆಯಲ್ಲಿದ್ದು (1962-1967) ನಿವೃತ್ತರಾದರು.

ರಾಧಾಕೃಷ್ಣನ್‌ರು ಭಾರತೀಯ ತತ್ತ್ವಶಾಸ್ತ್ರಕ್ಕೆ ಕೊಟ್ಟಿರುವ ಕೊಡುಗೆ ಗಮನಾರ್ಹ. ವಿದೇಶಗಳಲ್ಲಿ ಭಾರತೀಯ ತತ್ತ್ವಶಾಸ್ತ್ರವನ್ನು ಪರಿಚಯಿಸುವ ಕೆಲಸವನ್ನು ಅವರು ತಮ್ಮ ಜೀವನದುದ್ದಕ್ಕೂ ಬಹು ಶ್ರದ್ಧೆಯಿಂದ ಉತ್ಸಾಹದಿಂದ ಮಾಡಿದರು.

ವಿಶ್ವ ಕವಿ ರವೀಂದ್ರನಾಥಠಾಗೂರರ ಸಾಹಿತ್ಯದಲ್ಲಿರುವ ತತ್ತ್ವಶಾಸ್ತ್ರವನ್ನು ಅಧ್ಯಯನ ಮಾಡಿ ರಾಧಾಕೃಷ್ಣನ್‌ರು ಬರೆದಿರುವ 'ಫಿಲಾಸಫಿ ಆಫ್ ಠಾಗೂರ್' ಎಂಬುದೇ ಅವರ ಪ್ರಥಮ ಗ್ರಂಥ. ತಮ್ಮ ಚಿಂತನೆಗಳನ್ನು, ವ್ಯಾಖ್ಯಾನಗಳನ್ನು, ವಿಚಾರ ಸರಣಿಗಳನ್ನು ಅನಂತರ ಅವರು ರಚಿಸಿದ ಇಪ್ಪತ್ತಕ್ಕೂ ಮಿಕ್ಕ ಗ್ರಂಥಗಳಲ್ಲಿ ಪ್ರಕಟಿಸಿದ್ದಾರೆ. ಎರಡು ಸಂಪುಟಗಳಲ್ಲಿ ಪ್ರಕಟವಾಗಿರುವ ಅವರ 'ಭಾರತೀಯ ದರ್ಶನ' ಮಹತ್ವ ಗ್ರಂಥವೆಂದು ಪ್ರಸಿದ್ಧವಾಗಿದೆ. ಹಿಂದೂ ಜೀವನದೃಷ್ಟಿ, ಹಿಂದೂ ವೇದಾಂತ, ಸ್ವಾತಂತ್ರ್ಯ ಮತ್ತು ಸಂಸ್ಕೃತಿ, ಭಾರತೀಯ ಸಂಸ್ಕೃತಿ, ಧರ್ಮ ಮತ್ತು ಸಮಾಜ ಹಾಗೂ ಮತಗಳ ಪುನರುಜ್ಜೀವನ ಮುಂತಾದುವು ರಾಧಾಕೃಷ್ಣನ್‌ರ ಸುಪ್ರಸಿದ್ಧ ಗ್ರಂಥಗಳು.

ರಾಧಾಕೃಷ್ಣನ್‌ರು ಶ್ರೇಷ್ಠ ವಾಗ್ಮಿಗಳಾಗಿದ್ದರು. ಗಹನವಾದ ವಿಷಯಗಳನ್ನು ಅತ್ಯಂತ ಸರಳವಾಗಿ ಸರಸವಾಗಿ ಹೇಳುತ್ತಿದ್ದುದು ಅವರ ಉಪನ್ಯಾಸದ ವೈಖರಿ. ಅವರ ಬರೆವಣಿಗೆಯೂ ಹಾಗೆಯೇ. ಸುಲಭತೆ ಸುಭಗತೆ ರಾಧಾಕೃಷ್ಣನ್ ಶೈಲಿಯ ವಿಶಿಷ್ಟ ಲಕ್ಷಣಗಳು.

ರಾಧಾಕೃಷ್ಣನ್‌ರು ಅಮೇರಿಕ, ಇಂಗ್ಲೆಂಡ್, ಚೀನ ಜಪಾನ್–ಮೊದಲಾದ ಹೊರದೇಶಗಳಲ್ಲೂ ವ್ಯಾಪಕವಾಗಿ ಸಂಚರಿಸಿದ್ದಾರೆ. ಆಕ್ಸ್‌ಫರ್ಡ್, ಕೇಂಬ್ರಿಡ್ಜ್, ಯೇಲ್, ಹಾರ್‌ವಾರ್ಡ್-ಮುಂತಾದ ಪ್ರಸಿದ್ಧ ವಿಶ್ವವಿದ್ಯಾಲಯಗಳಲ್ಲಿ ಉಪನ್ಯಾಸಮಾಡಿ 'ವಿದೇಶಗಳಲ್ಲಿ ಭಾರತದ ಸಾಂಸ್ಕೃತಿಕ ರಾಯಭಾರಿ' ಎಂದೂ ಹೆಸರಾಗಿದ್ದರು.

ರಾಧಾಕೃಷ್ಣನ್ ಅವರಿಗೆ ಲಭಿಸಿದ್ದ ಗೌರವ ಪ್ರಶಸ್ತಿಗಳ ಪಟ್ಟಿಯೂ ದೊಡ್ಡದೆ. ಭಾರತದ ನಾನಾ ವಿಶ್ವವಿದ್ಯಾಲಯಗಳಿಂದ ಗೌರವ ಡಿ-ಲಿಟ್ ಪದವಿ ಪಡೆದು ಸನ್ಮಾನಿತರಾಗಿದ್ದರು.

(25 ನೇ ಪುಟನೋಡಿ)



## ಜನಪದ ಗೀತೆಯಲ್ಲಿ

# ಬಸವಣ್ಣ

ಡಾ। ನಂ. ತಪಸ್ವೀಕುಮಾರ್.

ರೈತರ ಜೀವನಸಂಗಾತಿಗಳಾದ ಎತ್ತುಗಳು ನಂದೀಶ್ವರನ ಸಾಕ್ಷಾತ್ ಅವತಾರವೆಂಬ ನಂಬಿಕೆ ನಮ್ಮ ಜನತೆಯಲ್ಲಿ ಪ್ರಬಲವಾಗಿದೆ. ನಮ್ಮ ಪುರಾಣಗಳ ಪ್ರಕಾರ, ನಂದಿ ಪರಮೇಶ್ವರನ ಪ್ರಿಯವಾಹನ. ನಂದಿಯ ಬಣ್ಣ ಅಚ್ಚ ಬಿಳಿ. ಆಕಾರವಂತೂ ಅತ್ಯಾಕರ್ಷಕ. ಈತ ಶಿವನ ಪ್ರಮಥಗಣದಲ್ಲಿ ಗಣ್ಯನಾದ ವ್ಯಕ್ತಿಕೂಡ ಹೌದು. ಕಾರಣಾಂತರಗಳಿಂದ ಶಾಪಗ್ರಸ್ತನಾಗಿ, ಭೂಮಂಡಲದಲ್ಲಿ, ವಿಶೇಷವಾಗಿ ಈಗಿನ ಉತ್ತರ ಕರ್ಣಾಟಕ ಪ್ರಾಂತದಲ್ಲಿ ಹುಟ್ಟಿ, ಮುಂದೆ ಬಸವಣ್ಣನೆಂದು ವಿಖ್ಯಾತನಾದ ವಿಶಿಷ್ಟ ಶಕ್ತಿ ಈತ. ತನ್ನ ಬುದ್ಧಿ ಚಾತುರ್ಯಗಳ ಬಲದಿಂದ ಉನ್ನತಾಧಿಕಾರ ಪಡೆದು ಬದುಕಿನುದ್ದಕ್ಕೂ ಪರಮಶಿವಭಕ್ತನಾಗಿ, ಆದರ್ಶಪ್ರಾಯನಾಗಿದ್ದವನು. ಲಿಂಗ ಜಂಗಮಗಳ ಸೇವೆ ಮಾಡಿ, ಭಕ್ತಿಭಂಡಾರಿ ಎಂಬ ಬಿರುದು ಪಡೆದರೂ ಬೀಗದೆ, ಲೋಕೋದ್ಧಾರ ಕಾಯಕ ನಿರತನಾಗಿದ್ದು, ಕೊನೆಗೆ ರಾಜಕೀಯ ಹಗರಣಕ್ಕೆ ಬೇಸತ್ತು ಬಸವ ಕಲ್ಯಾಣದಿಂದ ಕೂಡಲಸಂಗಮಕ್ಕೆ ಬಂದು, ಅಲ್ಲಿಯೇ ತಪಸಿ ಮುಕ್ತನಾಗಿ, ಮತ್ತೆ ಶಿವಗಣ ಪದವಿ ಗಳಿಸಿಕೊಂಡವನು, ಎಂದು ಮುಂತಾಗಿ ಹರಿಹರಾದಿ ಕವಿಗಳು ವರ್ಣಿಸಿದ್ದಾರೆ. ಬಸವಣ್ಣ ವಾಸ್ತವವಾಗಿ 12ನೆಯ ಶತಮಾನದಲ್ಲಿ ಬದುಕಿದ್ದು, ಕರ್ಣಾಟಕದಲ್ಲಿ ಬಹು ದೊಡ್ಡ ಕ್ರಾಂತಿಯಾಗಲು ಕಾರಣ ಕರ್ತನಾದನೆಂಬುದು ದಿಟ. ಆತನ ಅನೇಕ ವಚನಗಳು ಆತ್ಮಚರಿತ್ರಾತ್ಮಕ ಭಾವಗೀತೆಗಳಾಗಿವೆ.

ನಮ್ಮ ಕವಿಗಳಿಂದ ಅವತಾರ ಪುರುಷನಾಗಿ ಪವಾಡಪುರುಷನಾಗಿ, ಜಗಜ್ಯೋತಿ ಬಸವೇಶ್ವರ ಪ್ರಭುವಾಗಿ ಚಿತ್ರಿತನಾಗಿರುವ ಬಸವಣ್ಣನನ್ನು, ಜನಸಾಮಾನ್ಯರಾದ ಜಾನಪದರು (folks) ಕಲ್ಪಿಸಿಕೊಂಡಿರುವ ಬಗೆ, ಹಾಗೂ ಬಸವಣ್ಣನಿಗೂ ಮೂಕ ಬಸವಣ್ಣಗಳಾದ ಎತ್ತುಗಳಿಗೂ ತಳಕು ಹಾಕಿರುವ ರೀತಿ ಕುತೂಹಲಕಾರಿಯೂ ಸ್ವಾರಸ್ಯಪೂರ್ಣವೂ ಆಗಿದೆ. ಕನ್ನಡ ಜನಪದ ಕವಿಯ ಪ್ರಕಾರ ಬಸವಣ್ಣ ಬೆವರು ಬಸಿದು ಗೇದದ್ದರಿಂದಲೇ ಜಗತ್ತು ಅನ್ನ ಕಂಡಿತು.

ಹೆಗಲ ಕೊಟ್ಟಾಗ ಜಗ ಆಯ್ತು:  
ಮೊದಲಿತ್ತ ನಿರಂಕಾರ ಆಮ್ಯಾಲೆ ಬಿಸಲಾಯ್ತು  
ಭೂಮಿಮಂಡಲಕ ಬಿಗು ಆಗ್ಯೊ ಬಸವಣ್ಣ  
ಹೆಗಲ ಕೊಟ್ಟಾಗ ಜಗ ಆಯ್ತೊ.

ಬಸವಣ್ಣನ ಹುಟ್ಟು, ಬೆಳವಣಿಗೆ, ಮುಕ್ತಿ–ಇವುಗಳ ಬಗೆಗೂ ಜನಪದ ಕವಿ ಕೆಲವರಿಗೆ ವಿಚಿತ್ರವೆಂದು ತೋರುವಂತೆ ಕಲ್ಪಿಸಿಕೊಂಡು ಹಾಡಿರುವುದು ಗಮನಾರ್ಹವಾಗಿದೆ.

ಸುಕಮುನಿ ಜಡೆಯಲ್ಲಿ ಬಸವಣ್ಣ ಜನಿಸ್ಯಾನ  
ದೂದ ಸಮುದ್ರ ಮುಗದಾನೊ ಬಸವಣ್ಣ  
ಇಂದ್ರನ ಸೆರಿಯ ಬಿಗದಾನೊ

ಜಡಿಯ ಝಾಡಿಸಿ ಎದ್ದ ಕೈಯ ಹಿಡಗಲ್ಲ ಹಿಡದ

ಹೋಗ್ಯಾನ ಬಸವನ ಎದುರಿಗೋ ಜಾನಮುನಿ  
ಹೊಡಡೋ ನಡುವಿನ ಝೋಡಿಗೊ

ಅಲ್ಲ್ಯಾಳ ಇಲ್ಲ್ಯಾಳ ಬಾಗಿಲ ಕೋಟ್ಯಾಗಾಳ  
ಬಾಗೋಡ್ಯಾಗಾಳ ಬಸರಾಳ ಗೋಪೆಮ್ಮ  
ಅಡವ್ಯಾಗ ಬಂದು ಹಡದಾಳೊ

ಉತ್ರಾಣಿ ಘಟ್ಯಾಗ ಪತ್ತರಿ ಸೆಳ್ಯಾಗ  
ಪುತ್ರ ಹುಟ್ಟ್ಯಾನ ಬಸವಣ್ಣ ಸಲಗರ  
ಮಿತ್ರೇರು ಆರತಿ ಬೆಳಗ್ಯಾರೊ

ಕೈಲಾಸದ ಬಸವಣ್ಣ ಪೈಲೇಕ ತಾ ಬಂದು  
ಬಾಗೋಡಿ ಊರಾಗ ನೆಲಿಸ್ಯಾನ ಬಸವಣ್ಣ  
ಬಂದವರಿಗಿ ಶರಣ ಕೊಡತಾನೊ

ಎಂಟೆತ್ತು ಹೊಡಕೊಂಡು ಕಂಟ್ಯಾಗ ಬರುವಾಗ
ಗಂಟೆ ಬಿದ್ದಾಳೊ ಇದಿವಾಯೊ ಹೊಟ್ಟೀಲಿ
ಬಂಟ ಹುಟ್ಯಾನ ಬಸವಣ್ಣೊ
ಕಲ್ಯಾಣವೆಂಬೋದು ಕಟಕರೋಣಿ ಆದದ
ಬಿಟ್ಟೋಡಿ ಬಂದ ಬಸವಣ್ಣ ಕೊಡೆಕಲ್ಲ
ವಟ್ಟರಗಲ್ಲಾಗ ನೆಲಸ್ಯಾನೊ — ಇತ್ಯಾದಿ.

ಇಂಥ ಕಲ್ಪನೆಗಳು ಕವಿಯ ಸ್ವಕಪೋಲ ಕಲ್ಪಿತವಾದವಲ್ಲ; ಪೌರಾಣಿಕ, ಐತಿಹಾಸಿಕ ಹಾಗೂ ಐತಿಹ್ಯ ಅಂಶಗಳನ್ನು ಆಧರಿಸಿ, ಜನತೆಯ ನಂಬಿಕೆಯನ್ನು ಅಪ್ಪಿಕೊಂಡು ಹುಟ್ಟಿದವು. ಇವುಗಳಲ್ಲಿ ವಾಸ್ತವಾಂಶವಾದ ರೇಖೆಗಳನ್ನು ಕಾಣಬಹದು.

ಬಸವಣ್ಣನ ಮುದ್ದಿನ ಮಡದಿಯ ಬಗೆಗೆ ಜನಪದ ಕವಿಯ ಕಲ್ಪನೆ ಹೀಗೆ:

ಬಸವನ ಹೆಂಡತಿ ಹಸುಮಗಳು ನೀಲಮ್ಮ
ಎಸಳ ಯಾಲಕ್ಕಿ ತಳಸ್ಯಾಳೊ ನೆನದಾಳ
ಬಸವ ನಿನ ನಾಮ ಗೆದಿಸ್ಯಾಳೊ
ನಾಗಸಾಗರದ ಮ್ಯಾಲೆ ನಾಕಗಳಿಗಿ ಸೀರಿ
ಯಾರ ಬಂದಾರ ಹೊಸದಾಗಿ ಬಸವನ
ಮಡದಿ ಬಂದಾಳ ಮನಿಯಾಗೊ.

ಜನಪದ ಕವಿ ಬಸವಣ್ಣನ ಮತ್ತೊಬ್ಬಳು ಮಡದಿಯ ಪ್ರಸ್ತಾಪ ಮಾಡಿಲ್ಲ.

### ಬಸವನ ಪೂಜೆ

ಹೀಗೆ ಜನಪದ ಕವಿಗಳು ಅರ್ಧ ಪೌರಾಣಿಕವೂ ಅರ್ಧ ಐತಿಹಾಸಿಕವೂ ಆದ ವಿಶಿಷ್ಟ ವ್ಯಕ್ತಿ ಬಸವಣ್ಣನಿಗೂ ಕೈಲಾಸಕ್ಕೂ, ಬಾಗೇವಾಡಿ, ಬಸವ ಕಲ್ಯಾಣ, ಸಂಗಮಗಳಿಗೂ ಮಿಕ್ಕ ಜನತೆಗೂ ಇರುವ ಸಂಬಂಧಗಳನ್ನು ಬಲ್ಲಂತೆ ಗುರುತಿಸಿ ಹಾಡಿದ್ದಾರೆ. ಪೂಜ್ಯನಾದ ನಂದೀಶ್ವರನೇ ಬಸವಣ್ಣನೆಂದು ಬಗೆದು, ಕಲ್ಲಿನಲ್ಲಿ, ಗಾರೆ ಇಟ್ಟಿಗೆಗಳಲ್ಲಿ ಆತನ ಭವ್ಯ ಮೂರ್ತಿಯನ್ನು ಕರ್ನಾಟಕದ ಎಲ್ಲ ಕಡೆಯಲ್ಲೂ ರಚಿಸಿ, ಭಯಭಕ್ತಿ, ಪ್ರೀತಿ ವಿಶ್ವಾಸಗಳಿಂದ ಮೆರೆಸುತ್ತ ಇವೊತ್ತಿಗೂ ಜನ ಪೂಜಿಸುತ್ತಿದ್ದಾರೆ. ಉತ್ತರ ಕರ್ನಾಟಕ ಪ್ರಾಂತದಲ್ಲಿ ಬಸವಣ್ಣನ ಪ್ರಭಾವ, ಪೂಜೆಗಳು ವಿಶೇಷ ರೀತಿಯಲ್ಲಿ ರೂಢಿಯಲ್ಲಿರುವುದು ಸಕಾರಣವೆ.

ಸಲ್ಗರ ಹಾದ್ಯಾಗ ಮಂದ್ಯಾಕ ನೆರದದ
ನಂದಿಕೋಲಾಟ ನವುಲಾಟ ಬಸವಣ್ಣನ
ತೇರೆಳೆದು ಮಂದಿ ಬರತಾರೊ
ಮುನ್ನೂರ ದೀವಟಗಿ ಮುತ್ತಿನ ಪಲ್ಲಕ್ಕಿ
ಹೊತ್ತೇರಿ ಮೆರೆವ ಇವನ್ಯಾರೊ ಸಲಗರದ
ಗಚ್ಚಿನ ಗುಡಿಯ ಬಸವಣ್ಣೊ
ಎಲ್ಲ ದೇವರ ಗುಡಿಯು ಕಲ್ಲೀಲೆ ಕಟಸ್ಯಾರ
ಬಲ್ಲೀದ ಬಾಗೋಡಿ ಬಸವನ ಗುಡಿ ಗ್ವಾಡಿ
ಬೆಲ್ಲದಚ್ಚೀಲೆ ಮುಗಿಸ್ಯಾರೊ
ಬಾಗೋಡಿ ಬಸವಣಗ ಬಾಲೆಲ್ಲ ಬಂಗಾರ
ಮೋಲಿನ ಇಣಿಗಿ ಮಳಿಜಡದ ಬಸವಣ್ಣ
ಬೆಳೆಯೆಂದರ್ಹ್ಹಿಂಗ ಬೆಳದಾನೊ
ಚಲುವ ನಂ ಬಸವಣ್ಣ ಚಲುವರ ನೋಡಿರಿ
ಚದುರಂಗದ ಮ್ಯಾಲ ಮನಗ್ಯಾನ ಬಸವಣ್ಣ
ಚಲುವಿಕಿ ನೋಡಾಕ ಶಿವ ಬಂದೊ–ಇತ್ಯಾದಿ.

### ರೈತನ ರಾಬ:

ಪ್ರಕೃತ ಲೇಖನದಲ್ಲಿ, ಮೂಕಬಸವಗಳೆಂದು ಪ್ರಸಿದ್ಧವಾಗಿರುವ ಎತ್ತುಗಳ ಬಗೆಗೆ ನಮ್ಮ ಜನಪದ ಕವಿಗಳ ಕಲ್ಪನೆಗಳು, ಭಾವನೆಗಳು ಯಾವ ಬಗೆಯವೆಂಬುದನ್ನು ಕೆಲವು ಜನಪದ ತ್ರಿಪದಿಗಳ ಆಧಾರದಿಂದ ಪರಿಚಯಿಸುವ ಪ್ರಯತ್ನವಿದೆ. ನಾನು ಬಲ್ಲಂತೆ ಕರ್ನಾಟಕದಲ್ಲಿ ಮಾತ್ರವಲ್ಲ, ಇಡೀ ದಕ್ಷಿಣ ಭಾರತದಲ್ಲಿಯೇ ಉಗಾದಿಹಬ್ಬದ ತರುವೆಯಲ್ಲಿ ಹೊನ್ನಾರು ಕಟ್ಟಿ ಬೇಸಾಯವನ್ನು ಆರಂಭ ಮಾಡುವ ರೂಢಿಯಿದೆ. ಇದಕ್ಕೆ ಮುಖ್ಯಕಾರಣ ಈ ತರುವೆ (Season) ಯಲ್ಲಿಯೇ ಮುಂಗಾರು ಮಳೆ ಬೀಳತೊಡಗುವುದು. ಆ ಮಳೆಯೇ ರೈತರು ಚುರುಕಾಗಿ ಒಕ್ಕಲುತನದಲ್ಲಿ ತೊಡಗುವಂತೆ ಪ್ರೇರೇಪಣೆ ನೀಡುತ್ತದೆ. ಭೂಮಿತಾಯಿ ತನ್ನ ಮಣ್ಣಿನ ಮಗ ರೈತನನ್ನು ಪ್ರೀತಿಯಿಂದ ಬಯಲಿಗಿಳಿಸುತ್ತಾಳೆ; ತಂದೆಯಾದ ಮಳೆರಾಜ ಜಗತ್ತನ್ನು ತಂಪಾಗಿಸಿ, ಒಣನೆಲದಲ್ಲಿ ಹೊಸ ಜೀವ ಚೈತನ್ಯವನ್ನು ಹೊಮ್ಮಿಸುತ್ತಾನೆ.

ಭೂಮಿತಾಯಿಯ ಗಂಡ ಮಳೆರಾಯ...........
ಎಂಬುದೊಂದು ನುಡಿ ಇದೆ.



ಉಗಾದಿ ಹಬ್ಬಕ ಹೊಸ ಹೋರಿ ಹೊಡಿ
ರೈತ ನಿನ ರಾಬ ಸುರುವಾಯ್ತು ಬಸವಣ್ಣ
ಕಾಯಿ ಒಡದ ಕೈಯ ಮುಗದೇನೊ,
ಹಸನಾಗಿ ಹೊಡಿತಮ್ಮ ಸೋಸಿ ನೇಗಿಲ ಕುಂಟೆ
ಹಸನಿ ಭರಣಿ ಕೃತಿಕ ರೋಣಿಯ ಹೊಸನೀರ
ಕುಡದಾಳ [ನಮ್ಮ] ಭೂಮಿ ತಾಯಿ
ಗದ್ದರಿಸಿ ಮಳಿರಾಯ ಬಿದ್ದಾನ ಭೂಮಿಮ್ಯಾಲ
ಎದ್ದಾನ ಒಕ್ಕಲಿಗ ಬೆಳತಾನ ಕೂರಿಗಿ ಕುಂಟೆ
ಬಿದ್ದಾವೊ ಬಡಿಗೇರ ಅರಮನಿಗೊ
ಹುಗ್ಗಿಯ ಉಂಡಾನ ಮಗ್ಗಿಂಗಿ ತೊಟ್ಟಾನ
ಬಗ್ಗಿ ಕೂರಿಗಿ ಬಿಗದಾನ ಒಕ್ಕಲಿಗನ
ಬುದ್ಧಿಗಿ ಭೂಮಿತಾಯಿ ಒಲಿದಾಳೊ

ಇತ್ಯಾದಿ ಗೀತೆಗಳು ರೈತನ ರಾಬ–ಬೇಸಾಯದ ಬದುಕನ್ನು ಚಿತ್ರಿಸುತ್ತವೆ ಭೂಮಿತಾಯಿ, ಮಳೆರಾಜ, ಬಸವಣ್ಣ, ರೈತರು – ಇವರೆಲ್ಲಾ ಒಂದೇ ಕುಟುಂಬಸ್ಥರು; ರಕ್ತ ಬಾಂಧವರು. ಇವರ ಸಹಕಾರದಿಂದಲೇ ಮೇಟಿನಿಂತು, ರಾಟೆಯಾಡಿ, ರಾಶಿತುಂಬಿ, ಜಗತ್ತು ಅನ್ನನೀರುಗಳನ್ನು ಕಾಣುತ್ತಿರುವುದು, ಭಾರತೀಯರು ಮಾತ್ರವಲ್ಲ. ಜಗತ್ತಿನ ಬಹುಮಂದಿ ರೈತರು ಭೂಮಿಯನ್ನು 'ಭೂ ಮಿ ತಾ ಯಿ' ಎಂಬುದಾಗಿ ಭಾವಿಸಿ, ಪೂಜಿಸುತ್ತಿರುವ ಸಂಪ್ರದಾಯ ಗಮನಾರ್ಹವಾಗಿದೆ.

### ಹೋರಿ ಶೃಂಗಾರ:

ಮುಂಗಾರು ಮಳೆ ಚೆನ್ನಾಗಿ ಬಿದ್ದು, 'ಭೂಮಿತಾಯಿ ಹೊಸ ನೀರನ್ನು ಕುಡಿದು ಹಿಗ್ಗಿ, ಮಣ್ಣುಗಂಪನ್ನು ಸೂಸಿದನಂತರ, ರೈತರು ಹದವರಿತು ನೆಲವನ್ನು ಉಳು, ಬಿತ್ತನೆಗೆ ಸಿದ್ಧತೆ ಮಾಡಿಕೊಳ್ಳುತ್ತಾರೆ. ಆ ತರುವೆಯಲ್ಲಿ ಆಚರಿಸುವ ಕಾರಹಬ್ಬ, ಅಥವಾ ಕಾರಹುಣ್ಣಿಮೆ ಹಬ್ಬ ಎಂಬುದು ಪ್ರಧಾನವಾಗಿ ದನಕರುಗಳಿಗೆ ಸಂಬಂಧಿಸಿದ ದೊಡ್ಡ ಹಬ್ಬ. ಆ ಸಂದರ್ಭದಲ್ಲಿ ರೈತರ ಮನೆಯಲ್ಲಿರುವ ಎಲ್ಲ ಎತ್ತು, ಹಸುಗಳನ್ನು ಕರುಗಳನ್ನು ಮೈ ತೊಳೆದು, ಕೊಂಬುಗಳಿಗೆ ಬಣ್ಣ ಬಳಿದು ಬಂಗಾರದಂತೆ ಹೊಳೆಯುವ ಸುನೇರಿ ಕಾಗದವನ್ನು ಅಂಟಿಸಿ, ಕೊರಳಿಗೆ ಹೂಮಾಲೆ, ಗಂಟೆ ಸರಪಳಿ, ಮುಂತಾದ ಸಕಲ ಆಭರಣಗಳನ್ನು ತೊಡಿಸಿ, ಊರಿನ ಸುತ್ತಲೂ ಮೆರವಣಿಗೆ ಮಾಡುತ್ತಾರೆ. ಕೊನೆಗೆ ಊರಿನ ಹೆಬ್ಬಾಗಿಲಿಗೆ ಕಟ್ಟಿರುವ ಮಾವು, ಬೇವುಗಳ ಸೊಪ್ಪಿನಿಂದ ಅಲಂಕೃತವಾದ ಹಸಿರು ತೋರಣವನ್ನು ಯಾವ ಶೂರ ತನ್ನ ಹೋರಿಯೊಂದಿಗೆ ಮೊದಲು ಬಂದು ಕೀಳುತ್ತಾನೋ ಆತನಿಗೆ ಊರಿನ ಹಿರಿಯರು ಹಾರ ಹಾಕಿ ಓಚಿತ ಮರ್ಯಾದೆ ಮಾಡಿ, ಆ ವರ್ಷದ ಮಳೆ, ಬೆಳೆಗಳು ಚೆನ್ನಾಗಿ ಸಂಧಿಸುತ್ತವೆ ಎಂಬ ಭರವಸೆ ತಳೆಯುತ್ತಾರೆ. ಈ ಸಂಪ್ರದಾಯ ಕರ್ನಾಟಕದ ಎಲ್ಲ ಕಡೆಯೂ ಆಚರಿತವಾಗುವುದು ಕುತೂಹಲದ ಸಂಗತಿ. ಈ ಬಗೆಗೆ ಸಮಗ್ರ ಅಧ್ಯಯನ ನಡೆಯಬೇಕಾಗಿದೆ.

ಕಾರಹಬ್ಬದಲ್ಲಲ್ಲದೆ, ಜಾತ್ರೆ, ಪರಿಸೆಗಳ ಸಮಯದಲ್ಲಿಯೂ ಹೋರಿಗಳ ಶೃಂಗಾರ ಮಾಡುವುದನ್ನು ಕಾಣುತ್ತೇವೆ. ಮೊದಲಿಗೆ ಉತ್ತರ ಕರ್ನಾಟಕದ ಕಾರಹುಣ್ಣಿಮೆಯಂದಿನ ಹೋರಿಯ ಚಿತ್ರ ನೋಡಿ :

ಹೊನ್ನುಗ್ಗಿ ಹೊಸ ದಿನ ಬಸವಣ್ಣಗರಸಿನ
ಕಾರುಣ್ಣಿದಿನ ಮದಿಮಗೊ, ಬಸವಣ್ಣ
ಕರಿ ಕಡದು ಚಾಜ ತರತಾನೊ

ತಮ್ಮ ಹೋರಿಗಳು ಬಣ್ಣದಲ್ಲಿ ಬಿಳಿಯವಾಗಿ, ತಳಿಯಲ್ಲಿ ಅತ್ಯುತ್ತಮವಾಗಿ, ಸಕಲ ಸಲ್ಲಕ್ಷಣಗಳನ್ನು ಉಳ್ಳವಾಗಿ, ಹಾಯದೆ, ಒದೆಯದೆ ಸಾಧುವಾಗಿ, ಕೆಲಸದಲ್ಲಿ ಮನಸಾಗಿ ಇರುವಂಥವುಗಳಾದರೆ, ಜಾತಿ ಜಾನಪದರಿಗೆ ತುಂಬ ಸಂತೋಷ, ಹೆಮ್ಮೆ. ಅವುಗಳನ್ನು ತಮ್ಮ ಮಕ್ಕಳಂತೆಯೇ ವಾತ್ಸಲ್ಯದಿಂದ ಕಂಡು, ಬೇಕಾದಂಥ ತಿಂಡಿ ತೀರ್ಥಗಳನ್ನು ಕೊಟ್ಟು ಸಾಕುತ್ತಾರೆ; ಅವುಗಳನ್ನು ಮಾರಲು ಒಪ್ಪುವುದಿಲ್ಲ. ಒಂದು ವೇಳೆ ಅಂಥವುಗಳನ್ನು ಬಹು ಬೆಲೆತೆತ್ತು ಕೊಂಡವರೂ ತುಂಬ ಮುತುವರ್ಜಿ ವಹಿಸುತ್ತಾರೆ. ಜಾತ್ರೆ, ಪರಿಸೆಗಳಿಗೆ ಅವುಗಳನ್ನು ಸಕಲ ಶೃಂಗಾರಗಳೊಂದಿಗೆ ಅಲಂಕರಿಸಿ ಕರೆದು ಕೊಂಡು ಹೋಗಿ ದೇವರ ಪೂಜೆಯನ್ನು ಮಾಡಿಸಿ, ತಮಗೂ

ತಮ್ಮ ದನಕಗಳಿರುಗೂ ಒಳಿತಾಗಲೆಂದು ಹರಕೆ ಹೊತ್ತು ವಾಪಸಾಗುತ್ತಾರೆ. ಹೋರಿಗಳ ಲಕ್ಷಣ, ಶೃಂಗಾರ ಕುರಿತಾದ ಹತ್ತಾರು ಉತ್ತಮ ತ್ರಿಪದಿಗಳಿವೆ. ಅವುಗಳ ಪೈಕಿ ಕೆಲವನ್ನು ಮಾತ್ರ ಇಲ್ಲಿ ಉದ್ಧರಿಸಬಹುದು.

ಎಲ್ಲೆಲ್ಲಿ ನೋಡಿದ್ರು ಬಸವನಂಥಾವರಿಲ್ಲ
ಹಲ್ಲು ನೋಡಿದ್ರ ಹವಳಾವೊ ತುಟಿವ್ಯಾಲೆ
ಬಿಲ್ಲ ಮೀಸೆಯ ಚಿಲುವಾವೊ

ಬಸವಣ್ಣನ ಖುರ ನೋಡು, ಕೊಡ ಗದ್ದಿಗಿ
ನೋಡು ಸಿಂಗಾರನೋಡು, ಸಿರಿನೋಡು
ಬಸವಣ್ಣ ಬೀಸುವ ಬಾಲ ಇಣಿನೋಡು

ಬಸವನ ಕಳಿ ನೋಡೊ ಹದನಾರ ಸುಳಿ
ನೋಡೊ ಏಳೆಡಿ ಸರ್ಪ ಇಣಿವ್ಯಾಲೊ
ಬಸವಣ್ಣ ಮುತ್ತಿನ ಅಳ್ಳೊಳ್ಳಿ ಹಣಿವ್ಯಾಲೊ

ಮೂಡಲಗೇರಿಗೆ ಹೋಗಿ ಮೂಡಲ್ಹೋರಿಯು
ತಂದೆ; ಮುತ್ತಿನ ಚತ್ತರಿಗಿ ನೆಳ್ಳಿಗಿ ಬಸವಣ್ಣ
ಮುಖ್ಯಸ್ಥ ಆಗ್ಯಾನೊ ಭೂಮ್ಯಾಗೊ

ನಮ್ಮೆತ್ತಿನ ಕೊರಳಾಗ ನಾಕೆಳಿ ಸರಪಳಿ
ಯಾರು ಬಿಚ್ಚೀರಿ ಕೊಡಿರಣ್ಣ ನಮ್ಮೆತ್ತು
ಮೆಯ್ವಲ್ದೊ ನೀರ ಕುಡಿವಲ್ದೊ

ಆರು ಸಾವಿರ ಗಂಟೆ ಮೂರು ಸಾವಿರ ಝುಂಗ
ದೂರ ಕೇಳ್ಯಾವೊ ದುರ್ಗಕೊ ನಮ್ಮೆತ್ತು
ಧೂಳ ಹಾರ್ಸ್ಯಾವೊ ಗಗನಕೊ

ಜೋಡ ಪದರಿನ ಹಗ್ಗ ಜೋತಾಡು ಬಾಸಿಂಗ
ಮಾತಾಡೊ ಗಂಟೆ ಕೊರಳಾಗ ಕಟಗೊಂಡು
ಕೂರಿಗಿ ಮುಂದ ಕುಣಿದಾನೊ

ಬೆಳ್ಳನ್ನ ಬಿಳಿಯೆತ್ತ ಬೆಳ್ಳಿಯ ಬಾರಕೋಲ
ಹಳ್ಳದ ಮಾಗಿ ಹೊಡದಾವೊ ನಮ್ಮೆತ್ತ
ಬೆಳ್ಳಕ್ಕಿ ಕಂಡ ಬೆದರ್ಯಾವೊ-ಇತ್ಯಾದಿ

**ಸೋಮವಾರ ಬಿಡುವು:**

ಕರ್ನಾಟಕದಾದ್ಯಂತ ಜಾತಿ ಕಸಬುದಾರರಾದ ರೈತರು ಯಾರೂ ಸೋಮವಾರ ಎತ್ತುಗಳನ್ನು ಆರು ಗಾಡಿಗಳಿಗೆ ಹೂಡಿ ದುಡಿಸುವುದಿಲ್ಲ. ಸೋಮವಾರದ ದಿನ ಅವುಗಳಿಗೆ ವಿಶೇಷ ಸ್ನಾನ, ಪಾನ, ಪೂಜೆ, ಬಿಡುವು. ಇದಕ್ಕೆ ಕಾರಣವನ್ನು ಜನಪದ ಕವಿ ಸೂಚಿಸಿರುವುದು ಕುತೂಹಲಕಾರಿ.

ಬಸವಣ್ಣ ಬರುವಾಗ ಅವರವ್ವ ಹೇಳ್ಯಾಳ
ಬಸವಾಗ ಹೂಡಿ ಹೊಡಿಬ್ಯಾಡೊ ಸ್ವಾಮಾರ
ಹಸುಮಗನಾಗಿ ತಿರಗಲ್ಯೊ
ಸ್ವಾಮಾರ ಉದಿಯಾಗ ಹುಟ್ಯಾನ ಬಸವಣ್ಣ
..................................ಇತ್ಯಾದಿ.

ಬಹುಶಃ ಬಾಗೇವಾಡಿಯ ಬಸವಣ್ಣ ಸೋಮವಾರ ಹುಟ್ಟಿದನೆಂಬ ನಂಬಿಕೆಯ ಪರಿಣಾಮವಾಗಿಯೋ ಏನೋ, ನಮ್ಮ ಜಾನಪದರು ಸೋಮವಾರವನ್ನು ಗೆಯ್ಯುವ ಎತ್ತುಗಳಿಗೆ ಬಿಡುವಿನ ದಿನವನ್ನಾಗಿ ಘೋಷಿಸಿ, ಆಚರಿಸಿಕೊಂಡು ಬಂದಿದ್ದಾರೆ. ಕೆಲವು ಪ್ರಾಂತದ ಜನ ಮಾತ್ರ ಸೋಮವಾರ ಗಾಡಿಗೆ ಕಟ್ಟಿ ದುಡಿಸುವುದನ್ನು ಕಾಣುತ್ತೇವೆ. ಮಿಕ್ಕೆಲ್ಲರೂ ಆ ದಿನ ಹೋರಿಗಳಿಗೆ ಈಜು ಹೊಡೆಸಿ ಸ್ನಾನ ಮಾಡಿಸುತ್ತಾರೆ. ಅದು ಸಾಧ್ಯವಿಲ್ಲದವರು ಮನೆಯಲ್ಲೇ ಮೀಯಿಸುತ್ತಾರೆ.

ಹರಿವ ಹಳ್ಳದ ನೀರು ದುರಳ ಸೀಗೆಕಾಯಿ
ದೊರೆ ನಮ್ಮ ಬಸವ ಜಳಕವ ಮಾಡಿದ ನೀರು
ಧರುಮರ ಬಾಗಲಿಗೆ ಹರಿದಾವೊ

**ಇದ್ದರು ದುಡಿಮೆ, ಸತ್ತರು ದುಡಿಮೆ**

ದೇವರಿಗೆ ಬಿಟ್ಟ ಬಸವನನ್ನು ಬಿಟ್ಟರೆ, ಮಿಕ್ಕ ಎತ್ತುಗಳೆಲ್ಲ ದುಡಿದೇ ಒಳ್ಳೆಯ ಮೇವು, ನೀರುಗಳನ್ನು ತಮ್ಮ ಒಡೆಯರಿಂದ ಪಡೆದು ಸುಖ ಪಡಬೇಕು. ದುಡಿಯದೆ ಸುಖವಾಗಿ ಜೀವನ ಮಾಡುವುದು ಹಳ್ಳಿಯ ಜನ ಹಾಗೂ ಜಾನುವಾರುಗಳಿಗೆ ಸಾಧ್ಯವಿಲ್ಲ.

(ಮುಂದುವರೆಯುವುದು)



# ಜೀವನ ಯಾತ್ರೆ

—"ನಾಣಿ"

"ನರರೆಲ್ಲ ಪಯಣಿಗರು ಕಾಲಮರುಭೂಮಿಯಲಿ ಪರಮ ಪೂಜ್ಯರು ನಡೆದು ಮುಂದೆ ಸಾಗಿಹರು, ಹಿರಿಯ ಹೆಜ್ಜೆಯ ಗುರುತ ಹಿಡಿದು ನೀ ಸಾಗುತಿರು, ಗುರಿ ಮುಟ್ಟುವುದು ಸುಲಭ" ಎಂದು ಮುದ್ದುರಾಮಶತಕದ ಕರ್ತೃ "ನಾಣಿ' ಹೇಳಿದ್ದಾನೆ ನಿಜ. ಕಾಲವು ಅನಂತ ಆದರೆ ಅದರಲ್ಲಿರುವ ನಮಗೆ ದೊರೆತಿರುವ ಪಾಲು ಸಾಂತ, ಸೀಮಿತ, ಇತಿಮಿತಿಗಳಿಗೆ ಒಳಪಟ್ಟು ಗತಿ ಕಾಣಬೇಕಾಗಿದೆ. ಇದೊಂದು ನರರ ಬಾಳಿನ ಚಕ್ರ ಭ್ರಮಣ. ಜೀವನ ಮಾರ್ಗವನ್ನು ಕ್ರಮಿಸಲು ತಾಯ ಗರ್ಭದಿಂದ ಮಾನವನ ಭೂಪತನದಿಂದ ಕೊಟ್ಟು ಇಹಲೋಕದ ಯಾತ್ರೆಯ ತುಟ್ಟ ತುದಿಯನ್ನು ಮುಟ್ಟುವ ತನಕ ಸಾಗಬೇಕಾಗಿರುವ ಬಾಳದಾರಿ, ನೀಳುದಾರಿ. ಈ ದಾರಿಯನ್ನು ತುಳಿದು, ಧೂಳೆಬ್ಬಿಸಿ, ಹಾಳಾಗಿಸಿ, ಹಳ್ಳತಿಟ್ಟುಗಳನ್ನಾಗಿಸಿ, ಮುಂಬರಿದವರು ಹಿಂಬಾಲಕರನ್ನು ಎಡಹಿ ಮುಗ್ಗರಿಸುವಂತೆ ಮಾಡುವ ಕಂಕರ ಬೆಂಜರೆಗಳ ಗುಡ್ಡ ಮಾಡಿ, ತೊಂದರೆಗಳ ಹಂದರವನ್ನಾಗಿಯಾದರೂ ಮಾಡಿಕೊಳ್ಳಬಹುದು. ಅಥವಾ ಬಾಳ ಬಟ್ಟೆ ಹಿಡಿದು ಸಾಗುವಾಗ ಎಚ್ಚರದಿಂದ ಕ್ರಮಿಸಿ, ಕ್ರಮಿಸುವ ದಾರಿ ಸುಗಮವಾಗುವಂತೆ ಶ್ರಮಿಸಿ, ಗುರಿಯತ್ತ ಸಾಗಿ ಗಂತವ್ಯನ್ನು ಮುಟ್ಟುವ ಮನ ಮಾಡಬಹುದು. ಎಲ್ಲವೂ ನಮಗೇ ಸೇರಿದ್ದು. ಈ ಜೀವನ ಪಥದಲ್ಲಿ ಕ್ರಮಿಸುವ ಯಾತ್ರಿಕರು ಒಬ್ಬರಲ್ಲ, ಒಂದೇ ರೀತಿಯ-ನೀತಿಯ-ಜಾತಿಯವರೂ ಅಲ್ಲ. ಪ್ರತಿಯೊಬ್ಬರೂ ತಮಗೆ ಸರಿಕಂಡ ಮಾರ್ಗದಲ್ಲಿ ನಡೆಯುತ್ತಾರೆ.

ಪ್ರಾರಂಭದಲ್ಲಿ ಶೈಶವ. ಅಲ್ಲಿ ಮಗುವಿಗೆ ತನ್ನದೇ ಆದ ಜಗತ್ತು. ಪಾಪ ಪುಣ್ಯಗಳ ತಾರತಮ್ಯದ ಅರಿವಾಗಲಿ ಧರ್ಮ ಕರ್ಮಗಳ ವಿವೇಚನೆಯಾಗಲಿ ಇಲ್ಲದೆ, ಹರ್ಷವಾದರೆ ನಲಿವ' ನೋವಾದರೆ ಅಳುವ ಹಸಿದರೆ ಕಾಡುವ, ಬೇಕಾದರೆ ಬೇಡುವ, ಬೇಡಿಪರೂ ದೊರೆಯದಿರೆ ಕಾಡುವ, ಕಾಡಿ ಪಡೆದು ತನ್ನ ಸಂಗಡಿಗರೊಂದಿಗೆ ಕಲೆತು ಮಲೆತು ಆಡಿ ಪಾಡಿ ಕುಣಿದು ಕುಪ್ಪಳಿಸಿ, ಸಪ್ಪಳವಿಲ್ಲದೆ ಸಾಗುವ ಬಾಲಜಗತ್ತಿನ ದಾರಿಯು, ಪ್ರತಿ ವಯಸ್ಕರ ಪಾಲಿನ ಗತವೈಭವ, ಸವಿಗನಸು. ಅದನ್ನು ಮೆಲಕು ಹಾಕಬಹುದೇ ಹೊರತು ಮತ್ತೆ ಪಡೆವಂತಿಲ್ಲ.

ನಂತರದಲ್ಲಿ ವಿದ್ಯಾರ್ಥಿದೆಸೆ. ಆಟ ಪಾಟಗಳಲ್ಲಿ ಆಸಕ್ತಿ ತೋರಿ ಗೆಳೆಯರೊಂದಿಗೆ ಸೇರಿ ಸಂತೋಷದಿಂದ ಕಾಲ ಕಳೆವ ಅವಕಾಶ. ವಿದ್ಯಾರ್ಥಿಯಾಗಿ ಮಾರ್ಗ ಕ್ರಮಿಸುವಾಗ ಅವನ ಹೊಣೆಗಾರಿಕೆ ಆರಂಭವಾಗುತ್ತದೆ ಏಳುವುದರಿಂದ ಹಿಡಿದು ಶಾಲೆಗೆ ಹೋಗಿ ಗುರು ಮುಖೇನ ವ್ಯಾಸಂಗ ಮಾಡಿ ಮತ್ತೆ ಮನೆಗೆ ಬಂದರೂ ಮುಗಿಯದ ವಿದ್ಯಾರ್ಜನೆ. ವಿದ್ಯಾರ್ಥಿಯಾಗಿ ಓದಿ ಜ್ಞಾನದ ಬುತ್ತಿಯನ್ನು ಕಟ್ಟುತ್ತಾನೆ ಮುಂದಿನ ಮಾರ್ಗಕ್ರಮಣಕ್ಕಾಗಿ. ಈ ಜ್ಞಾನದ ಬುತ್ತಿಯು ಅವನ ಗಂತವ್ಯದವರೆಗೂ ಸವೆಯದೆ ಊಡಣಿಸಾಗಿರಬೇಕಾದುದು. ಪ್ರೌಢದರ್ಜೆಗೇರುವ ಬಯಕೆ, ಆಟೋಟಗಳಲ್ಲಿ ಸ್ಪರ್ಧೆ, ಸಾಹಿತ್ಯಕ ಚಟುವಟಿಕೆಗಳು, ಮನರಂಜನೆಯೊಂದಿಗೆ ಮನೋವಿಕಾಸಗಳನ್ನು ಅನುಭವಿಸುವ ಹಂತದ ವಿದ್ಯಾರ್ಥಿ ಜೀವನದ ಯಾತ್ರೆ ಮಹತ್ವಪೂರ್ಣವಾದುದು. ಇಲ್ಲಿಯೇ ಬಾಳದಾರಿ ಕವಲೊಡೆಯುವುದು. ಸರಿಯಾದ ಕೈಮರವಿಲ್ಲದಲ್ಲಿ ಎತ್ತಲೋ ಗೊತ್ತುಗುರಿಯಿಲ್ಲದೆ ಸಾಗಬೇಕಾಗುತ್ತದೆ.

ನಂತರದ ಯೌವನ, ಹುರುಪು, ಅತ್ಯುತ್ಸಾಹ, ಅದಮ್ಯ ಆಕಾಂಕ್ಷೆಗಳು, ಅಗಣಿತ ಯೋಜನೆಗಳು ಜೀವನದ ಹಂದರದ ಮೇಲೆ ಹಬ್ಬುವ ಬಳ್ಳಿಗಳು. ಈ ಯೌವನದ ಉದ್ಯಾನದಲ್ಲಿ ವಿಹಾರಕ್ಕೆ ಸಂಗಾತಿಯ ಬಯಕೆ ಮೂಡುತ್ತದೆ. ಗಂಡು ಹೆಣ್ಣುಗಳ-

ಪರಸ್ಪರ ಆಕರ್ಷಣೆಗಳು, ಕಾಮ ಪ್ರೇಮಗಳ ಸಂಕಲೆಗಳು, ಪ್ರೀತಿ ಪ್ರಣಯಗಳು ಯುವಕ ಯುವತಿಯರ ಬೆನ್ನೇರಿ, ಬೆನ್ನಂಟಿ, ಬನ್ನಗೊಳಿಸುತ್ತವೆ. ಜೀವನರಂಗದಲ್ಲಿ ಶೃಂಗಾರ ವೀರ ರಸಗಳ ರಸನಿಮಿಷಗಳ ಅನುಭವವೇ ಹಂತ ಹಂತದಲ್ಲೂ ನಡೆಯುತ್ತದೆ. ಶೃಂಗಾರದ ಹುಚ್ಚು, ವೀರತ್ವದ ಕೆಚ್ಚುಗಳು ಮೆಚ್ಚುಗೆಯಾಗುವ ಈ ಯೌವನ ಯಾತ್ರಾಪ್ರಕರಣವು ಅತ್ಯಂತ ಆಕರ್ಷಕ. ತನ್ನ ಬಯಕೆಗಳ ಪೂರೈಕೆಗಾಗಿ, ಇನಿಯರ ಒಲುಮೆಗಾಗಿ, ಶ್ರಮಿಸಲು ಆರಂಭ ಇಲ್ಲಿಂದ. ತಾನೇ ತಾನಾಗಿ ಇದುವರೆಗೂ ವಿಹರಿಸಿದ ಹಕ್ಕಿಯು ಈ ಯೌವನದ ವನದಲ್ಲಿ ಪ್ರೇಮ ಜಾಲಕ್ಕೆ ಸಿಕ್ಕುತ್ತದೆ. ಗಂಡ–ಹೆಂಡತಿ–ಮಗು ಸಂಸಾರ. ಈ ಹಂತವು ಸುಗುಮವಾಗಿ ಸಾಗುವುದು ಅವರವರ ಪುಣ್ಯ, ಒಂದು ಏರಿಗೆ ಳಿದರೆ ಒಂದು ನೀರಿಗೆಳೆಯಬಹುದು ಅಥವಾ ಹಾಲು ಸಕ್ಕರೆ ಬೆರೆತಂತೆ ಅವಿನಾಭಾವದಿಂದ ಬೆರೆಯಬಹುದು, ನೆರೆಯಬಹುದು. ಬೆಸೆದರೆ ಹಂದರ, ಎಸೆದರೆ ಕಂದರ, ಇಲ್ಲಿ ಸುಖ ದು:ಖಗಳ ನಾಟ್ಯ. ದುಡಿತದ ಕಂಬಚ್ಚಿನಲ್ಲಿ ಜೀವ–ದೇಹಿಯು ಸಿಕ್ಕಿ ಸಣ್ಣಾಗಿ, ಹಣ್ಣಾಗುವುದೂ ಉಂಟು, ಸೋತು ಹೆಂಬೇಡಿಯಾಗಿ ಹಿಮ್ಮೆಟ್ಟುವುದೂ ಉಂಟು.

ಈ ಯೌವನ ಮಾರ್ಗವು ಬದುಕಿನ ನಡುರಸ್ತೆ. ಹಸು ಕಂದನ ಕೊಡುಗೆ ನೀಡಿದ ಅಥವಾ ನೀಡಲಿರುವ ಮಡದಿಯೆಡೆಗೆ ಓಡುವ ರಸ್ತೆ. ಪತಿಗಾಗಿ ಸತಿ, ಪತ್ನಿಗಾಗಿ ಪತಿ ಎದುರು ನೋಡುತ್ತಿರುವ ಆತುರದ ಕಾತುರದ ದಾರಿ.

ಈ ದಾರಿಯು ಹರಿದಾರಿಯಾಗಿ ಸಾಗಿ ಮುಂಬರಿದಾಗ ಪ್ರೌಢಾವಸ್ಥೆಯ ಬಾಳು. ಜೀವನದ ಯೋಜನೆಗಳು ಹಲವಾರು. ವ್ಯಾಪಾರ-ಉದ್ಯಮ-ನೌಕರಿ-ಸಾಹಿತ್ಯ ಜ್ಞಾನ ವಿಜ್ಞಾನಗಳ ಆಧಾರದಿಂದ ಸಾಧನೆಯಿಂದ ಸಿದ್ಧಿಯೆಡೆಗೆ ಮುಂದಗತಿಯಿಂದ ಕ್ರಮಿಸುವ ದಾರಿ. ಇಲ್ಲಿ ನಾನಾ ಅನುಭವಗಳ ಕೊಳು ಕೊಡುಗೆ ನಡೆಯುವುದು. ಆಧ್ಯಾತ್ಮದಿಂದ ಹಿಡಿದು ರಾಜಕಾರಣದವರೆಗೆ ಪ್ರತಿಕ್ಷೇತ್ರದಲ್ಲೂ ಇಟ್ಟ ಹೆಜ್ಜೆ – ತೊಟ್ಟ ಪಣ - ಸಿದ್ಧಿಗಳಿಗಾಗಿ ಬುದ್ಧಿ ಜೀವಿಗಳ ಗುದ್ದಾಟವೂ ಇಲ್ಲಿ ನಡೆಯುತ್ತದೆ. ಒಮ್ಮೊಮ್ಮೆ ಬಲಾಢ ಪೃಥಿವೀ – ಶಕ್ತನು ಅಶಕ್ತನನ್ನು ತುಳಿದು ಬಾಳುವುದುಂಟು.

ಜೀವನದ ಆಳದ ಅನುಭವ ಪಡೆದ ಈ ದಾರಿಯಲ್ಲಿ ಪ್ರತಿಮಾನವನೂ ತನ್ನ ಗುರಿಯನ್ನು ಕಾಣಬೇಕೆಂದು ಮುಂದೆಸಾಗುತ್ತಾನೆ. ಎತ್ತಲೋ ಗೊತ್ತುಗುರಿಯಿಲ್ಲದೆ ಅಲ್ಲ. ನಿರ್ದಿಷ್ಟ ಯೋಜನೆಯಿಂದ ಗಮ್ಯಸ್ಥಾನವನ್ನು ಮುಟ್ಟಬೇಕಾಗಿದೆ. ಇಲ್ಲಿ ಅದಕ್ಕೆ ತಕ್ಕ ಅನುಕೂಲತೆ ಇದೆ. ಸಾಧು ಸಂತರ ಧರ್ಮ ದೇಗುಲದ ದರ್ಶನ ಮಾಡಿ, ನಾಡು ನುಡಿಗಳ ಸೇವೆಗಾಗಿ, ನಾಡೇ ನನ್ನ ಸರ್ವಸ್ವವೆಂಬ ಭಾವ ನೆಬೆಳೆದು ಎಲ್ಲರ ಸಹಕಾರದಿಂದ ಎಲ್ಲರಿಗಾಗಿ ದುಡಿದು ದಣಿದು ಮಣಿವ ಮಾನವನು ಬಾಳ ಬಟ್ಟೆಯ ಕೊನೆಯ ಮೈಲುಗಲ್ಲುಗಳನ್ನು ಕ್ರಮಿಸಿ ಗಮ್ಯವನ್ನು ತಲಪುತ್ತಾನೆ. ಆದರೆ ಬಾಳಿನ ಗಮ್ಯ ಯಾವುದಾಗ ಬೇಕು? ಇದಕ್ಕೆ ಉತ್ತರ ನಮ್ಮಲ್ಲೇ ಇದೆ.

"ಈ ಅಸತ್ ಇದು ಬೇಡ, ಸತ್ಯದೆಡೆ ಓಡು ನಡೆ"
'ಕೊಳೆಗತ್ತಲಿದು ಬೇಡ, ಬೆಳಕಿನೆಡೆ ಸರಿದೋಡು"
"ಸತ್ತ ಬದುಕಿದು ಬೇಡ, ಅಮೃತತ್ವದೆಡೆ ಗೋಡು''-

ಎಂದು ಗಮ್ಯವನ್ನು ಸ್ಪಷ್ಟವಾಗಿ ಹಿರಿಯರು ತೋರಿದ್ದಾರೆ. ಇದರಲ್ಲಿ ಕ್ರಮಿಸಿ ಪ್ರಪಂಚದ ಪಂಚರಲ್ಲಿ ಒಬ್ಬರಾಗಿ ಪಂಚಶೀಲಗಳನ್ನು ಅಳವಡಿಸಿಕೊಂಡು ಪಂಚತ್ವವೈದುವುದೇ ಬಾಳ ಸಾರ್ಥಕತೆ. ಅದನ್ನೇ ಉಪನಿಷತ್ ಸಾರುತ್ತದೆ ''ಸಹನಾವವತು - - -''

ಸಹರಕ್ಷೆ, ಸಹಭೋಗ, ಸಹವೀರ್ಯ, ಸಹಜ್ಞಾನ ಸಹಕಾರಗಳೆಂಬ ಈ ಪಂಚಶೀಲದಲ್ಲಿ ಜೀವನ ತೊಡಗಿದಾಗಲೇ ಸಾರ್ಥಕತೆ. ಆಗಲೇ ದೊಡ್ಡತನ, ಆಗಲೇ ಮಹತ್ತು, ಆಗಲೇ ಮುಕ್ತಿ-ಸುಖ.

''ಯೋ ವೈ ಭೂಮಾ ತತ್ಸುಖಂ ನಾಽಲ್ಪೇ ಸುಖಮಸ್ತಿ
ಓಂ ಶಾಂತಿ —

---

**ದೇಶದ ಸರ್ವತೋಮುಖ ಪುರೋಭಿವೃದ್ಧಿಗೆ ಸುಶಿಕ್ಷಿತ ಯುವಕರ ತಂಡ ಅವಶ್ಯಕ.**





# ಮಹಾಗಣಪತಿ

— ಪಿ. ಎಸ್. ಚಂದ್ರಶೇಖರಯ್ಯ

"ಜಗತ್ತಿನಲ್ಲಿ ಪ್ರಥಮತಃ ಧರ್ಮದ ಕಲ್ಪನೆ ಮೂಡಿ ಬಂದದ್ದು ಭಾರತೀಯ ಮಾನವನ ಬುದ್ಧಿಯಲ್ಲಿ–" ಹೀಗೆಂದು ಒಬ್ಬ ಆಂಗ್ಲ ವಿಚಾರವಂತನ ಅನುಭವ ಸಿದ್ಧಾಂತ. ಸನಾತಳಾದ ಭಾರತಾಂಬೆಯ ಯುಗ ಯುಗಾಂತರಗಳ ಹೃದಯಾಂತರಾಳವನ್ನು ಅವಲೋಕಿಸಿದಾಗ ಈ ಮಾತಿನ ಅರ್ಥದ ಸ್ಪಷ್ಟ ಚಿತ್ರ ಗೋಚರವಾಗುತ್ತದೆ. ಆಕೆಯಲ್ಲಿ ಹುಟ್ಟಿ ಬೆಳೆದ ಮಹಾತತ್ತ್ವಗಳು, ಮಹಾವ್ಯಕ್ತಿಗಳು, ಮಹಾ ಕವಿವರ್ಯರು, ಮಹಾ ಯೋಗಿಗಳು ಈ ಹೆಗ್ಗಳಿಕೆಗೆ ಕಾಣಿಕೆ ಸಲ್ಲಿಸಿದ್ದಾರೆ. ಧರ್ಮ, ಸಂಸ್ಕೃತಿ, ನಾಗರೀಕತೆ, ದೈವೋಪಾಸನೆ, ದೈವ ಚಿಂತನೆ ಇವುಗಳಿಂದ ಜಗತ್ತಿಗೆ ಮಾರ್ಗದರ್ಶಕರಾಗಿದ್ದಾರೆ.

ದೈವ ಚಿಂತನೆ ಮತ್ತು ದೆವೋಪಾಸನೆ, ಭಾರತೀಯರಿಗೆ ಅನಾದಿ ಸಿದ್ಧವಾದದ್ದು. ಭಾರತೀಯರಾದ ನಾವು ಸಂವತ್ಸರ, ಅವನ, ಋತು, ಮಾಸ, ಪಕ್ಷ, ತಿಥಿಗಳಿಗನುಗುಣವಾಗಿ ಹಲವು ಹಬ್ಬಗಳನ್ನು ಆಚರಿಸುತ್ತಾ ಬಂದಿದ್ದೇವೆ. ಅವುಗಳಲ್ಲಿ ಭಾದ್ರಪದ ಶುಕ್ಲ ಪಕ್ಷದ ಚತುರ್ಥಿಯ ದಿನದಂದು ಆಚರಿಸುವ ಗಣೇಶನ ಹಬ್ಬವೂ ಒಂದು. ನಮ್ಮ ಹಿರಿಯ ನಾಯಕರಾಗಿದ್ದ ಬಾಲ ಗಂಗಾಧರ ತಿಲಕರು ಗಣೇಶನ ಹಬ್ಬವನ್ನು ಮನೆಯಲ್ಲಿ ಆಚರಿಸಬೇಕೆಂದು ಘೋಷಿಸಿದರು. ಅದು ಇಂದು ರಾಷ್ಟ್ರೀಯ ಹಬ್ಬವಾಗಿ ಪರಿಣಮಿಸಿದೆ. ಈಗ ಭಾರತದಲ್ಲಿ ಗಣೇಶನ ದೇವಾಲಯವಿಲ್ಲದ ಊರೇ ಇಲ್ಲವೆಂದರೆ ಅತಿಶಯೋಕ್ತಿಯಾಗಲಾರದು.

"ನಿರ್ವಿಘ್ನಂ ಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ" ದೇವನಾದ ಎಲೆ ಗಣಪತಿಯೇ ನಮ್ಮ ಎಲ್ಲ ವಿಧವಾದ ಕೆಲಸಗಳು ಯಾವಾಗಲೂ ನಿರ್ವಿಘ್ನವಾಗಿ ಪರಿಸಮಾಪ್ತಿಯನ್ನು ಹೊಂದುವಂತೆ ಮಾಡು–ಎಂಬುದಾಗಿ ಕೆಲಸದ ಪ್ರಾರಂಭದಲ್ಲಿ ಸರ್ವರೂ ಗಣೇಶನನ್ನು ಪೂಜಿಸುವುದು ಸತ್‌ಸಂಪ್ರದಾಯ. ಅಂತಹ ಮಹಿಮಾನ್ವಿತ, ವಿಘ್ನನಿವಾರಕ ಮಹಾಗಣಪತಿಯ ಸಮಗ್ರ ವ್ಯಕ್ತಿತ್ವದ ಸ್ಥೂಲ ಪರಿಚಯ ಪ್ರಸ್ತುತ ಲೇಖನದ ಉದ್ದೇಶ್ಯ.

### ಗಣೇಶನ ಉತ್ಪತ್ತಿ

ಗಣಪತಿಯ ಉತ್ಪತ್ತಿಯ ಬಗ್ಗೆ ಅನೇಕ ಕಥೆಗಳಿವೆ. ಅವುಗಳಲ್ಲಿ ಕೆಲವು ಹೀಗಿವೆ—

1. ಗಣಪತಿಯು ಪಾರ್ವತಿಯ ಗರ್ಭದಲ್ಲಿ ತಲೆಯಿಲ್ಲದೆ—ಜನಿಸಿದನು. ಆಗ ಪರಮೇಶ್ವರನು ಪೂರ್ವದಲ್ಲಿ ಕೈಲಾಸದಲ್ಲಿ ಇಟ್ಟಿದ್ದ ಗಜಾಸುರ ತಲೆಯನ್ನು ತಂದು ಸೇರಿಸಿದ್ದರಿಂದ ಗಣಪತಿಗೆ "ಗಜಾನನ" ಎಂದು ಹೆಸರಾಯಿತು. ಇದು ಸ್ಕಾಂದ ಪುರಾಣದ ಗಣೇಶಖಂಡದಲ್ಲಿ ಬರುವ ಕಥೆ.

2. ಪಾರ್ವತಿಯು ಒಂದು ದಿನ ಅಂಗಲೇಪನ ಮಾಡಿಕೊಳ್ಳುತ್ತಿದ್ದಾಗ, ಕೆಳಗೆ ಬಿದ್ದ ಲೇಪನ ವಸ್ತುಗಳನ್ನೆಲ್ಲಾ ಸೇರಿಸಿ ಒಂದು ಬೊಂಬೆಯನ್ನು ನಿರ್ಮಿಸಿದಳು. ಅದು ಆನೆಯಂತೆ ಇದ್ದುದರಿಂದ ಗಂಗೆಯಲ್ಲಿ ಬಿಟ್ಟಳು. ಗಂಗೆಯು ಅದನ್ನು "ಮಗು" ಎಂದು ಕರೆಯಲು ಪಾರ್ವತಿಯು ಹಾಗೆಯೇ ಕರೆದಳು. ಅದಕ್ಕೆ ಜೀವಕಳೆ ಬಂದಿತು. ಆಗ ಶಿಶುವಿಗೆ "ಗಜಾನನ" ಎಂದು ಹೆಸರಿಟ್ಟರು. ಸ್ಕಾಂದ ಪುರಾಣ ಕೌಮಾರಖಂಡದಲ್ಲಿ ಬರುವ ಕಥೆ.

3. ದಕ್ಷಯಜ್ಞವನ್ನು ನಾಶಪಡಿಸಿದ ಕಾಲದಲ್ಲಿ ವೀರಭದ್ರನು ವಿನಾಯಕನ ತಲೆಯನ್ನು ಕತ್ತರಿಸಿದನು. ಅದರಿಂದ ಹೆದರಿದ ಬ್ರಹ್ಮಾದಿಗಳು ವಿನಾಯಕನನ್ನು ಬದುಕಿಸಿ ಕೊಡಬೇಕೆಂದು ಪರಶಿವನಲ್ಲಿ ಮೊರೆಯಿಟ್ಟರು. ಈಶ್ವರನ ಆಜ್ಞೆಯಂತೆ ಉತ್ತರ ದಿಕ್ಕಿಗೆ ತಲೆಯನ್ನಿಟ್ಟು ಮಲಗಿದ್ದ ಒಂದು ಶಿರಸ್ಸನ್ನು ಕತ್ತರಿಸಿ ತಂದು ಸೇರಿಸಿದರು. ಆಗ "ಗಜಾನನ" ಎಂದು ಹೆಸರಾಯಿತು. ಬ್ರಹ್ಮ ದೈವಸ್ವತ ಪುರಾಣ ಗಣಪತಿ ಖಂಡದಲ್ಲಿ ಬರುವ ಕಥೆ ಇದು.

4. ಪಾರ್ವತಿಯು ಒಂದು ದಿವಸ ತನ್ನ ಮೈಯ ಕೊಳೆಯಿಂದ ಒಬ್ಬ ಹುಡುಗನನ್ನು ನಿರ್ಮಿಸಿದಳು. ಸ್ನಾನಕಾಲದಲ್ಲಿ ಒಳಗೆ ಯಾರನ್ನೂ ಬಿಡಕೂಡದೆಂದು ಕಾವಲಿರಿಸಿದಳು. ಆ ಹುಡುಗನು ಪಾರ್ವತಿಯು ಸ್ನಾನ ಮಾಡುತ್ತಿದ್ದಾಗ ಬಂದ ಶಿವನನ್ನು ತಡೆದು ದೊಣ್ಣೆಯಿಂದ ಹೊಡೆದ. ಕೋಪಗೊಂಡ ಶಿವನು ಆ ಹುಡುಗನ ಹತ್ತಿರಕ್ಕೆ ತನ್ನ ಗಣಗಳನ್ನು ಕಳುಹಿಸಿದ. ಗಣಗಳಿಗೆ ಗಣೇಶನ ಏಟನ್ನು ತಡೆಯಲಾಗಲಿಲ್ಲ. ದೇವತೆಗಳು ಬಂದರು. ಅವರಿಂದಲೂ ಗಣೇಶನ ಏಟನ್ನು ಸಹಿಸಲು ಸಾಧ್ಯವಾಗಲಿಲ್ಲ. ದೇವತೆಗಳು ಶಿವನನ್ನೇ ಮೊರೆಯಿಟ್ಟರು. ಶಿವನು ಬಂದು ಆ ಹುಡುಗನ ತಲೆಯನ್ನು ತ್ರಿಶೂಲದಿಂದ ಕತ್ತರಿಸಿದನು. ಹುಡುಗನ ಮರಣ ವಾರ್ತೆಯನ್ನು ತಿಳಿದ ಪಾರ್ವತಿಯು ಶಕ್ತಿ ದೇವತೆಗಳಿಂದ ಜಗತ್ತನ್ನು ಹಿಂಸಿಸತೊಡಗಿದಳು. ದೇವತೆಗಳು ಪಾರ್ವತಿಯನ್ನು ಪ್ರಾರ್ಥಿಸಿಕೊಂಡರು. ಮಗನನ್ನು ಬದುಕಿಸಿ ಕೊಡಿ ಎಂದು ಹೇಳಿ ಹಿಂಸೆಯನ್ನು ಉಪಸಂಹರಿಸಿದಳು. ಶಿವನ ಆಜ್ಞೆಯಂತೆ ಉತ್ತರ ದಿಕ್ಕಿನಲ್ಲಿ ಮಲಗಿದ್ದ ಆನೆಯ ತಲೆಯನ್ನು ಜೋಡಿಸಿ ಜೀವ ತುಂಬಿದರು. ಆ ಹುಡುಗನು ಅಂದಿನಿಂದ "ಗಜಾನನ" ಆರಿದನು. ಬ್ರಹ್ಮನು ಶ್ವೇತ ವರಾಹ ಕಲ್ಪದ ಗಣೇಶನ ಕಥೆಯನ್ನು ನಾರದನಿಗೆ ಹೇಳಿದ್ದು ಇದು.—(ಶಿವಪುರಾಣ ರುದ್ರ ಸಂಹಿತೆ)

### ಗಣೇಶನ ಸ್ವರೂಪ

ಗಣೇಶನ ರೂಪ ನಮಗೆಲ್ಲ ಚೆನ್ನಾಗಿ ಗೊತ್ತಿರುವುದೆ. ಆನೆಯ ಮುಖ (ಗಜವದನ), ಮೊರದಂತಹ ಕಿವಿಗಳು (ಶೂರ್ಪಕರ್ಣ), ದೊಡ್ಡ ಹೊಟ್ಟೆ (ಲಂಬೋದರ), ಕೆಂಪು ಬಣ್ಣದ ಸುಂದರ ದೇಹ, ನಾಲ್ಕು ಕೈಗಳು, ಇದೇ ಗಣೇಶನ ಆಕೃತಿ ಇಲಿ ಇವನ ವಾಹನ.

ಗಣಪತಿಯನ್ನು ಪಾರ್ವತಿಯು ತನ್ನ ಮೈಯ ಮಣ್ಣಿನಿಂದ ಮಾಡಿದಳೆಂಬ ಕಾರಣದಿಂದ ಗಣೇಶನ ಹಬ್ಬದಂದು ಮಣ್ಣಿನಿಂದ ಮಾಡಿದ ಮೂರ್ತಿಯನ್ನು ಪೂಜಿಸುತ್ತೇವೆ. ಆತನ ಕೈಗಳು ಒಂದೊಂದು ಮಹಿಮೆಯಿಂದ ಕೂಡಿವೆ. ಅವನ ಬಲಭಾಗದ ಒಂದು ಕೈಯಲ್ಲಿ ಪಾಶವಿದೆ. ಗಣೇಶ ಇದರ ಸಹಾಯದಿಂದ ತನ್ನ ಭಕ್ತರ ಮನಸ್ಸನ್ನು ಸೆಳೆಯುತ್ತಾನೆ. ಇನ್ನೊಂದು ವರದ ಹಸ್ತ. ಇದು ಗಣೇಶನನ್ನು ಮೊರೆಹೊಕ್ಕವರಿಗೆ ಭಯವಿಲ್ಲ ಎಂಬುದನ್ನು ಸೂಚಿಸುತ್ತದೆ. ಹೀಗೆಯೇ ಎಡಭಾಗದ ಎರಡು ಕೈಗಳಲ್ಲಿ ಒಂದು ಅಂಕುಶವನ್ನು ಹಿಡಿದಿದೆ. ಇದು ನಮ್ಮ ಅಜ್ಞಾನವನ್ನು ನಿವಾರಿಸುವ ಸಂಕೇತ. ಮತ್ತೊಂದು ಕೈಯಲ್ಲಿ ಮೋದಕಗಳಿಂದ ತುಂಬಿದ ಪಾತ್ರೆಯಿದೆ. ಇದು ಗಣೇಶನು ಎಲ್ಲರಿಗೂ ಸಂತೋಷವನ್ನು ಕೊಡುತ್ತಾನೆ ಎಂದು ತೋರಿಸುತ್ತದೆ. ಗಣಪತಿಯ ದೊಡ್ಡ ತಲೆ, ಅವನು ಮಹಾಬುದ್ಧಿಶಾಲಿ ಎಂಬುದನ್ನು ಸೂಚಿಸುತ್ತದೆ.

ಮೊರಗಳಂತೆ ಅಗಲವಾದ ಕಿವಿಗಳು, ಗಟ್ಟಿ ಕಾಳುಗಳನ್ನು ಬೇರ್ಪಡಿಸುವ ಮೊರಗಳಂತೆ; ಅವುಗಳು ಸತ್ಯಶೋಧನೆ ಮತ್ತು ಭಕ್ತರ ಪ್ರಾರ್ಥನೆಯನ್ನು ಗಮನವಿಟ್ಟು ಆಲಿಸುತ್ತಾನೆಂಬುದರ ಸಂಕೇತ. ಯಾವಾಗಲೂ ಆಡುವ ಅವನ ಸೊಂಡಿಲು 'ಸದಾ ಕ್ರಿಯಾಶೀಲನಾಗಿರು, ಎಂದು ಬೋಧಿಸಿದರೆ; ಅವನ ಏಕದಂತ ಒಂದೇ ಮನಸ್ಸಿನಿಂದ ಕೆಲಸ ಮಾಡಬೇಕೆಂದು ಸೂಚಿಸುತ್ತದೆ. ದೊಡ್ಡ ಹೊಟ್ಟೆ ಇಡೀ ಬಹ್ಮಾಂಡವೇ ಗಣಪತಿಯಲ್ಲಿ ಅಡಗಿದೆ ಎಂಬುದರ ಅರ್ಥ ಕೊಡುತ್ತಿದ್ದರೆ, ಇಲಿಯನ್ನು ಸವಾರಿ ಮಾಡುವುದು ಕಾಮ ಕ್ರೋಧಾದಿಗಳನ್ನು ಮೆಟ್ಟಿನಿಂತಿರುವುದರ ಸಂಕೇತ. ಹೀಗೆ ಗಣೇಶನ ಮಹಿಮೆಯನ್ನು ಅಳೆದಷ್ಟು ವಿಸ್ತಾರವಾಗಿದೆ, ಮತ್ತು ಗಣೇಶನು ಅನ್ವರ್ಥವಾಗಿ ನಾನಾ ಹೆಸರುಗಳಿಂದ ಪ್ರಸಿದ್ಧನಾಗಿದ್ದಾನೆ.

### ದುಷ್ಟ ಶಿಕ್ಷಕ-ಶಿಷ್ಟ ರಕ್ಷಕ;

ದೇವತೆಗಳಿಗೆ ಆಗಾಗ ರಾಕ್ಷಸರು ತೊಂದರೆ ಕೊಡುತ್ತಲೇ ಇದ್ದರು. ಅಂತೆಯೇ ಒಂದು ಸಾರಿ ತಾಳಾಸುರನೆಂಬ ರಾಕ್ಷಸನು, ಬ್ರಹ್ಮನ ವರದ ಬಲದಿಂದ ಕೊಬ್ಬಿ, ದೇವೇಂದ್ರನನ್ನು ಯುದ್ಧದಲ್ಲಿ ಸೋಲಿಸಿ, ಅವನ ವೈಭವಗಳನ್ನೆಲ್ಲಾ ವಶಪಡಿಸಿಕೊಂಡನು. ತಾಳಾಸುರನಿಗೆ ಪಶು ಜಾತಿಗೆ ಸೇರಿದ, ಆನೆಯಿಂದ ಮೃತ್ಯುವೆಂದು ತಿಳಿದ ದೇವೇಂದ್ರನು; ಆನೆಯ ಮುಖದವನಾದ ಗಣಪತಿಯನ್ನು ಶರಣು ಹೋದನು. ಗಣಪತಿಯು ತನ್ನ ಅತಿಶಯವಾದ ಪರಾಕ್ರಮದಿಂದ ತಾಳಾಸುರನ ಗರ್ವಭಂಗ ಮಾಡಿದನು. ಇದು ಗಣೇಶನ ಅಸಹಾಯ ಶೂರತನಕ್ಕೆ ಜ್ವಲಂತ ನಿದರ್ಶನ.

ಮತ್ತೊಂದು ಪ್ರಸಂಗ. ಒಂದು ಸಲ ಸ್ವರ್ಗದ ದೇವತೆಗಳಿಗೆ ರಾವಣನಿಂದ ದೊಡ್ಡ ವಿಪತ್ತು ಬರುವ ಸೂಚನೆ ಕಂಡು ಬಂದಿತು. ರಾವಣನು ಶಿವನನ್ನು ಒಲಿಸಿ; ನೆಲದಮೇಲೆ ಯಾವ ಕಾರಣದಿಂದಲೂ ಇಡಕೂಡದೆಂಬ ಕರಾರಿನ ಮೇಲೆ ಅವನಿಂದ ಆತ್ಮಲಿಂಗವನ್ನು ಪಡೆದು ಲಂಕೆಗೆ ಹೊರಟನು. ಪಶ್ಚಿಮ ಸಮುದ್ರ ತೀರ, ಸಂಜೆಯ ಸಂಧ್ಯಾವಂದನೆಯ ಸಮಯ. ಲಿಂಗವನ್ನು ನೆಲದಮೇಲೆ ಇಡುವಂತಿಲ್ಲ. ಏನು ಮಾಡುವುದೆಂದು ರಾವಣನಿಗೆ ಯೋಚನೆಯಾಯಿತು. ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ಗಣಪತಿ ಬಾಲಬ್ರಹ್ಮಚಾರಿಯ ವೇಶದಲ್ಲಿ ರಾವಣನಿಗೆ ಕಾಣಿಸಿಕೊಂಡನು. ರಾವಣನು ಸಮಯಕ್ಕೆ ಸರಿಯಾಗಿ ಬಂದ ಬಾಲಕನನ್ನು ಮೃದುವಾಗಿ ಮಾತನಾಡಿಸಿ; ನೆಲಕ್ಕಿಡದಂತೆ ಹೇಳಿ ಲಿಂಗವನ್ನು ಕೊಟ್ಟು ಸಂಧ್ಯಾವಂದನೆಗೆ ಹೋದನು. ಗಣಪತಿಯು ಭಾರವಾದರೆ ನೆಲದಮೇಲೆ ಇಡುತ್ತೇನೆಂದು ಹೇಳಿದ್ದ ಗಣಪತಿಯು ಸಂಧ್ಯಾವಂದನೆಯಅರ್ಧದಲ್ಲಿಯೇ ರಾವಣನನ್ನು ಕೂಗಿದನು. ರಾವಣನು ಬರುವಷ್ಟರಲ್ಲಿ ಶಿವನ ಆತ್ಮಲಿಂಗವು ನೆಲವನ್ನು ಸೇರಿದ್ದಿತು. ರಾವಣನು ಅನ್ಯಮಾರ್ಗವಿಲ್ಲದೆ ಲಂಕೆಗೆ ಹಿಂದಿರುಗಬೇಕಾಯಿತು. ಹೀಗೆ ಗಣಪತಿಯು ದೇವತೆಗಳಿಗೆ ರಾವಣನಿಂದೊದಗಿದ್ದ ವಿಪತ್ತನ್ನು ಸುಲಭವಾಗಿಪರಿಹರಿಸಿದನು. ರಾವಣನ ಗರ್ವಭಂಗವಾಯಿತು. ಗೋಕರ್ಣದಲ್ಲಿರುವ ಶಿವಲಿಂಗವು ರಾವಣನು ತಂದದ್ದೆಂದು ನಂಬಿಕೆ.

### ಚಂದ್ರನಿಗೆ ಕೊಟ್ಟ ಶಾಪ ಕೃಷ್ಣನಿಗೆ ಪರಿತಾಪ!

ಗಣಪತಿಯು ಲೋಕ ಸಂಚಾರಾರ್ಥವಾಗಿ ತನ್ನ ವಾಹನವನ್ನೇರಿ ಚಂದ್ರ ಲೋಕಕ್ಕೆ ಬಂದನು. ಸರ್ವಾಂಗ ಸುಂದರನಾದ ಚಂದ್ರನು, ಗಣಪತಿಯ ಆಕಾರವನ್ನೂ ಅವನ ವಾಹನವನ್ನೂ ನೋಡಿ ನಕ್ಕನು. ಕೋಪಗೊಂಡು ಗಣಪತಿಯು "ಎಲೈ ಚಂದ್ರ ! ನಿನಗೆ ನಿನ್ನ ಸೌಂದರ್ಯದ ಮದ ಹೆಚ್ಚಿ ಹೋಗಿದೆ. ಎಲ್ಲ ಲೋಕಗಳೂ ಪೂಜಿಸುವ ನನ್ನನ್ನು ಹಾಸ್ಯಮಾಡಿ ನಗುತ್ತಿರುವೆಯಾ, ಮೂರ್ಖ ! ಇದೊ ನಿನ್ನ ಅಹಂಕಾರಕ್ಕೆ ತಕ್ಕ ಫಲವನ್ನನುಭವಿಸು !, ನಿನ್ನ ಗರ್ವಕ್ಕೂ ಅಜ್ಞಾನಕ್ಕೂ ಕಾರಣವಾದ ನಿನ್ನ ಸೌಂದರ್ಯ ಕುಂದಿ ಹೋಗಲಿ ! ಇನ್ನು ಮುಂದೆ ನಾನು ಹುಟ್ಟಿದ ದಿನವಾದ ಭಾದ್ರ ಶುದ್ಧ ಚೌತಿಯ ದಿನ ನಿನ್ನನ್ನು ನೋಡಿದವರು ಸುಳ್ಳು ಅಪವಾದಕ್ಕೆ ಗುರಿಯಾಗಲಿ !" ಎಂದು ಶಾಪವಿತ್ತನು

ಶಾಪ ಗ್ರಸ್ತನಾದ ಚಂದ್ರ ಪಶ್ಚಾತ್ತಾಪದಿಂದ ಗಣಪತಿಯನ್ನು ಕ್ಷಮೆಯಾಚಿಸಿದ. ಕ್ಷಮಾಶೀಲನಾದ ಗಣಪತಿಯು ಪ್ರಸನ್ನನಾಗಿ, "ಚಂದ್ರ ನೀನು ನಿನ್ನ ತಪ್ಪನ್ನು ತಿಳಿದುಕೊಂಡೆ, ನಿನ್ನ ಗರ್ವ ಹೋಗವುದು ಮುಖ್ಯ, ಚೌತಿಯ ದಿನ ನಿನ್ನನ್ನು ನೋಡಿ ಮಿಥ್ಯಾ ಪವಾದಕ್ಕೆ ಗುರಿಯಾದವರು ಶುದ್ಧ ಬಿದಿಗೆಯ ದಿನವೂ ನಿನ್ನ ದರ್ಶನ ಮಾಡಿದರೆ ಅಥವಾ ಸ್ಯಮಂತಕ ಮಣಿಯ ಕಥೆಯನ್ನು ಕೇಳಿದರೆ ಅಂಥವರು ಅಪವಾದದಿಂದ ಮುಕ್ತರಾಗಲಿ" ಎಂದು ಉಪಶಾಪವಿತ್ತನು.

ಗಣೇಶನ ಶಾಪ ಎಷ್ಟು ಪ್ರಬಲವಾದುದ್ದು ಎಂಬುದಕ್ಕೆ ಸ್ಯಮಂತಕ ಮಣಿಯ ಕಥೆಯನ್ನು ಹೇಳುತ್ತಾರೆ. ಅದು ಹೀಗಿದೆ.

ಒಮ್ಮೆ ದ್ವಾರಕೆಯಲ್ಲಿ ಸತ್ರಾಜಿತನ ತಮ್ಮ ಪ್ರಸೇನನೆಂಬುವನು, ತನ್ನ ಅಣ್ಣನಲ್ಲಿದ್ದ ಪ್ರಭಾವಶಾಲಿಯಾದ ಸ್ಯಮಂತಕ ಮಣಿಯನ್ನು ಬೇಟೆಗೆ ಕೊಂಡೊಯ್ದನು. ಪ್ರಸೇನನನ್ನು ಕೊಂದು ಮಣಿಯನ್ನು ತಂದ ಸಿಂಹವನ್ನು, ಜಾಂಬವಂತನೆಂಬ ಕರಡಿಕೊಂದು; ಆ ಮಣಿಯನ್ನು ತನ್ನ ಮಗುವಿನ ಕೈಗೆ ತಂದು ಕೊಟ್ಟಿತು. ಈ ಜಾಂಬವಂತ ಸಾಮಾನ್ಯ ಕರಡಿಯಲ್ಲ. ತ್ರೇತಾಯುಗದಲ್ಲಿ ಶ್ರೀ ರಾಮನ ಸೇವಕನಾಗಿದ್ದ ವೀರ.

ಪ್ರಸೇನನು ದ್ವಾರಕೆಗೆ ಬರಲಿಲ್ಲ. ಹಿಂದೆ ಆಸೆಪಟ್ಟಿದ್ದ ಕೃಷ್ಣನೇ ಪ್ರಸೇನನನ್ನು ಕೊಂದನೆಂದು ಸತ್ರಾಜಿತನ ಹವಣಿಕೆ. ಇತರರಿಗೂ ಈ ಮಾತು ಹಬ್ಬಿತು. ಯಾವ ತಪ್ಪೂ ಮಾಡದ ಕೃಷ್ಣನಿಗೆ ಇದರಿಂದ ವ್ಯಥೆಯಾಯಿತು. ಅವನು ಪ್ರಸೇನನ್ನು ಹುಡುಕಿಕೊಂಡು ಹೊರಟ. ಪ್ರಸೇನನ ಹೆಣ ಕಾಣಿಸಿತು. ಅದರ ಪಕ್ಕದಲ್ಲಿ ಸಿಂಹದ ಹೆಜ್ಜೆ ಕಂಡವು ಹೆಜ್ಜೆಯನ್ನು ಹಿಡಿದು ಜಾಂಬವಂತನ ಗುಹೆಯನ್ನು ಕೃಷ್ಣ ಹೊಕ್ಕ. ಅಲ್ಲಿ ಇಪ್ಪತ್ತೆಂಟು ದಿನಗಳ ಕಾಲ ಜಾಂಬವಂತನ ಜೊತೆಗೆ ಹೋರಾಡಿದ. ಕಡೆಗೆ ಜಾಂಬವಂತನು ಶ್ರೀ ಕೃಷ್ಣನೇ ಶ್ರೀ ರಾಮನೆಂದು ಅರ್ಥ ಮಾಡಿಕೊಂಡ. ಸ್ಯಮಂತಕ ಮಣಿಯನ್ನು ಕೃಷ್ಣನಿಗೆ ಒಪ್ಪಿಸಿದ. ಕೃಷ್ಣನು ಸ್ಯಮಂತಕವನ್ನು ಸತ್ರಾಜಿತನಿಗೆ ಕೊಟ್ಟು ತನಗೆ ಬಂದಿದ್ದ ಅಪವಾದವನ್ನು ತೊಡೆದು ಹಾಕಿದ.

ಕೃಷ್ಣನಿಗೆ ಆಶ್ಚರ್ಯವಾಯಿತು,, "ಹೀಗೆ ನನಗೆ ಏಕೆ ಕೆಟ್ಟ ಹೆಸರು ಬಂದಿತು? ಎಂದು ಯೋಚಿಸಿದ. ಮಹರ್ಷಿಗಳು "ನೀನು ಚತುರ್ಥಿಯ ದಿನದಂದು ಚಂದ್ರನನ್ನು ನೋಡಿದೆ," ಎಂದು ಹೇಳಿ ವಿನಾಯಕನು ಚಂದ್ರನಿಗೆ ಶಾಪ ಕೊಟ್ಟ ಕಥೆಯನ್ನು ಹೇಳಿದರು. ಅನಂತರ ಶ್ರೀ ಕೃಷ್ಣನು ಗಣೇಶನನ್ನು ಪೂಜಿಸಿದ. ಭಾದ್ರಪದ ಮಾಸದ ಚತುರ್ಥಿಯ ದಿನ, ಸಿದ್ಧಿವಿನಾಯಕ ವ್ರತ-ಗಣೇಶನ ಪೂಜೆ, ಸ್ಯಮಂತಕ ಮಣಿಯ ಕಥೆಯನ್ನು ಕೇಳಿ-ಅಂದು ಚಂದ್ರನನ್ನು ನೋಡಿದ ಅಪವಾದ ಬರುವುದಿಲ್ಲ ಎಂದು ಭಕ್ತರು ನಂಬುತ್ತಾರೆ

**ಗಣೇಶನ ಚಾಣಾಕ್ಷತನಕ್ಕೆ ಎರಡುನಿದರ್ಶನ:-**

ಒಂದು ದಿನ ಈಶ್ವರ ಪಾರ್ವತಿಯರು, ತಮ್ಮ ಮಕ್ಕಳಾದ ಕುಮಾರಸ್ವಾಮಿ ಮತ್ತು ಗಣಪತಿಯನ್ನು ಕುರಿತು ಮೊದಲು ಬ್ರಂಹಾಡವನ್ನು ಸುತ್ತಿ ಬಂದವರಿಗೆ ಮದುವೆ ಮಾಡುತ್ತೇವೆಂದು ತಿಳಿಸಿದರು. ಕುಮಾರಸ್ವಾಮಿಯು ಈ ಸ್ಪರ್ಧೆಯಲ್ಲಿ ತಾನೇ ಜಯ ಶಾಲಿಯಾಗಬೇಕೆಂಬ ಬಯಕೆಯಿಂದ, ತನ ವಾಹನವನ್ನೇರಿ ಹೊರಟನು ಗಣೇಶನು ಕುಮಾರಸ್ವಾಮಿಯು ಹೋಗುವವರೆಗೊ ಸುಮ್ಮನಿದ್ದು. ಆಮೇಲೆ ಸ್ನಾನ ಮಾಡಿ ಅತ್ಯಂತ ಭಕ್ತಿಯಿಂದ ತಂದೆ ತಾಯಿಯು ಸುತ್ತಲೂ ಏಳುಸಲ ಪ್ರದಕ್ಷಿಣೆ ಬಂದು ನಮಸ್ಕಾರ ಮಾಡಿ ಪಕ್ಕದಲ್ಲಿ ಕುಳಿತನು. ಏನೂ ಅರಿಯದಂತಿದ್ದ ಶಿವ ಪಾರ್ವತಿಯರು "ಮಗು ಗಣೇಶ ನೀನು ಬ್ರಂಹ್ಮಾಂಡವನ್ನು ಸುತ್ತಿ ಬರಲು ಹೊಗುವುದಿಲ್ಲವೇ"? ಎಂದು ಪ್ರಶ್ನಿಸಿದರು. ಅದಕ್ಕೆ ಬುದ್ಧಿಯಲ್ಲೂ, ಮಾತಿನಲ್ಲೂ ಚತುರನಾದ ಗಣೇಶನು "ಮಾತಾ ಪಿತೃಗಳೇ, ಸಮಸ್ತ ಲೋಕಗಳೂ ತಮ್ಮಲ್ಲೇ ಅಡಗಿವೆ, ಇದಕ್ಕೆ ವೇದ-ಪುರಾಣಗಳೇ ಸಾಕ್ಷಿ, ನಾನೀಗ ನಿಮ್ಮನ್ನು ಸುತ್ತಿದುದರಿಂದ ಇಡೀ ಬ್ರಹ್ಮಾಂಡವನ್ನು ಸುತ್ತಿದಂತಾಗಿದೆ. ನಾನೇ ಜಯಶಾಲಿ" ಎಂದನು. 'ಶಿವ ಪಾರ್ವತಿಯರು ಗಣೇಶನ ಅಸಾಧಾರಣವಾದ ತಿಳುವಳಿಕೆಗೆ ಮೆಚ್ಚಿ, ಸಿದ್ಧಿ-ಬುದ್ಧಿ ಎಂಬ ಸುಂದರ ಕನ್ಯೆಯರನ್ನು ಗಣಪತಿಗೆ ಮದುವೆ ಮಾಡಿದರು.

**ಶಿವಪುರಾಣ;**

ಗಣಪತಿಯ ಚುರುಕುತನಕ್ಕೆ ಮತ್ತೊಂದು ಪ್ರಸಂಗ ವೇದವ್ಯಾಸರು ಮಹಾಭಾರತವನ್ನು ಬರೆಯಲು ತಕ್ಕ ವ್ಯಕ್ತಿಯ ಬಗ್ಗೆ ಬ್ರಹ್ಮನಲ್ಲಿ ಪ್ರಸ್ತಾಪ ಮಾಡಿದರು. ಬ್ರಹ್ಮನು ಗಣಪತಿಯು ಅದಕ್ಕೆ ಸಮರ್ಥನಾದ ವ್ಯಕ್ತಿಯೆಂದು ತಿಳಿಸಿದನಂತೆ. ಆಗ ವ್ಯಾಸರು ಗಣಪತಿಯನ್ನು ಸ್ಮರಿಸಿದರು. "ವಿನಾಯಕ: ಕರ್ಮ ವಿಘ್ನ ಸಿಧ್ಯರ್ಥಂ ವಿನಿಯೋಜಿತ: ! ಗಣಾನಾಮಧಿಪತ್ಯೇಚ ರುದ್ರೇಣ ಬ್ರಹ್ಮಣಾ ತಥಾ !- (ಯಾಜ್ಞವಲ್ಕ್ಯ ಸ್ಮೃತಿ,) ವ್ಯಾಸರು "ನಾನು ಭಾರತವನ್ನು ಬೇಗ ಬೇಗ ಹೇಳಿಕೊಂಡು ಹೋಗುತ್ತೇನೆ. ನೀನು ತಪ್ಪಿಲ್ಲದೆ ಬರೆಯಬಲ್ಲೆಯಾ" ಎಂದು ಕೇಳಿದರಂತೆ. ಅದಕ್ಕೆ ಗಣಪತಿಯು "ಪೂಜ್ಯರೆ ನಾನು ಬರೆಯುತ್ತೇನೆ. ಆದರೆ ನನ್ನ ಲೇಖನಿಗೆ ಸ್ವಲ್ಪವೂ ವಿರಾಮ ಕೊಡದಂತೆ ಹೇಳುತ್ತಿರಬೇಕೆಂದು "ತಿಳಿಸಿದನಂತೆ. "ಶುತ್ಯೈಕತ್ ಪ್ರಾಹ ವಿಘ್ನೇಶೋ ಯದಿ ಮೇ ಲೇಖನಿ ಕ್ಷಣಮ್"! (ಭಾ- ಆ. ಪ.) ಹೀಗೆ ಪರಸ್ಪರ ಒಪ್ಪಂದವಾದ ನಂತರ ವ್ಯಾಸರು ಕಥೆಯನ್ನು ಹೇಳುತ್ತಾ ಹೋದರು, ಗಣಪತಿ ಬರೆದು ಕೊಳ್ಳುತ್ತಾ ಹೋದ, ಮಹಾ ಭಾರತ ಪ್ರಪಂಚಕ್ಕೆ ಲಭ್ಯವಾಯಿತು

**ಹೊರ ದೇಶಗಳಲ್ಲಿ ಗಣೇಶ**

ಗಣೇಶನ ದೇವಾಲಯಗಳು ಭಾರತದ ಹೊರಗೂ ಇವೆ, ಆ ದೇವಾಲಯಗಳಲ್ಲಿ ಇಂದೂ ಪೂಜೆ ನಡೆಯುತ್ತಿವೆ. ಕೆಲವು ದೇಶಗಳಲ್ಲಿ ಗಣೇಶನ ಹೆಸರು, ಆಕೃತಿ, ಸಂಕೇತ ಇತ್ಯಾದಿಗಳು ಬೇರೆ ಬೇರೆ ರೀತಿಯಲ್ಲಿವೆ. ಟಿಬೆಟ್, ನೇಪಾಳ, ಶ್ರೀಲಂಕ ಆಫ್‌ಘಾನಿಸ್ತಾನ, ಚೀನ, ಜಪಾನ್, ಇಂಡೋನೇಷ್ಯ ಕಾಂಬೋಡಿಯ, ಥಾಯ್ಲೆಂಡ್ ಮುಂತಾದ ದೇಶಗಳಲ್ಲಿ ಗಣೇಶನು ನಾನಾ ರೂಪಗಳಲ್ಲಿ ನೆಲಸಿದ್ದಾನೆ. ನಾನಾ ಹೆಸರುಗಳಿಂದ ಪ್ರಸಿದ್ಧನಾಗಿದ್ದಾನೆ. ಬರ್ಮದಲ್ಲಿ ಒಂದು ಕೈಯಲ್ಲಿ ನೆಲವನ್ನು ಮುಟ್ಟಿರುವ ಗಣಪತಿ ವಿಗ್ರಹವಿದೆ. ಕಾಂಬೋಡಿಯದಲ್ಲಿ ಎರಡೇ ಭುಜಗಳಿರುವ ವಿನಾಯಕನ ಮೂರ್ತಿ ಇದೆ. ಚೀನದ ಕುಂಗ್-ಹ್ಸಿ ಎನ್ ಬೌದ್ಧ ವಿಹಾರದಲ್ಲಿರುವ ಗಣಪತಿ ವಿಗ್ರಹದ ಎಡಗೈಯಲ್ಲಿ ಚಿಂತಾಮಣಿ ಇದೆ. ಹೀಗೆ ಬಹುರೂಪಿಯಾಗಿ ವಿಶ್ವದಲ್ಲಿ ಮೆರೆದಿದ್ದಾನೆ.

ಇಂತಹ ಬಹುಮುಖ ಪ್ರತಿಭೆಯುಳ್ಳ ಗಣಪತಿಯು ಸರ್ವ ಜನರ ಆರಾಧ್ಯ ಮೂರ್ತಿಯಾಗಿರುವುದು ಆಶ್ಚರ್ಯವೇನಲ್ಲ. ತನ್ನ ಅಸಾಧಾರಣವಾದ, ವಿಜ್ಞಾನ, ವಿಕ್ರಯ, ವಿಘ್ನ ನಿವಾರಣೆಯಿಂದ; ಜಾತಿ-ಸೂತಕ, ಕಟ್ಟು-ಕಟ್ಟಳೆಗಳನ್ನತಿ ಕ್ರಮಿಸಿ; ಊರು ಕೇರಿಗಳೆನ್ನದೆ, ದೇಶ ವಿದೇಶವೆನ್ನದೆ ವಿಶ್ವವ್ಯಾಪಿಯಾಗಿದ್ದಾನೆ. ಇಂದು ಭಾರತದ ಶುಕ್ಲಪಕ್ಷದ ಚತುರ್ಥಿಯಂದು ಪ್ರತಿಷ್ಠಿತವಾದ ಗಣಪತಿಯನ್ನು ಹಲವು ದಿವಸ ತಿಂಗಳವರೆಗೆ ಉತ್ಸವ-ಸಮಾರಂಭಗಳನ್ನು ಆಚರಿಸುತ್ತಿರುವುದು ಅರ್ಥವತ್ತಾಗಿದೆ. ಜನಜಾಗೃತಿಯ ಕುರುಹಾಗಿದೆ. ಎಲ್ಲಕ್ಕೂ ಮಿಗಿಲಾಗಿ ಗಣೇಶನ ಅಸದೃಶವಾದ ಮಹಿಮೆಯಿಂದ, ಜನತೆಯಲ್ಲಿ ಧರ್ಮಶ್ರದ್ಧೆ ಮೂಡುತ್ತಿರುವುದು ಶುಭಸೂಚಕದ ದ್ಯೋತಕವಾಗಿದೆ.

—

# ದರಿದ್ರ ದೇವೋಭವ

—ಎ. ಕೆ. ರಾಮೇಶ್ವರ್

'ಆಚಾರ್ಯ ದೇವೋಭವ' 'ಪಿತೃದೇವೋಭವ' 'ಮಾತೃದೇವೋಭವ' ಎಂದು ತಿಳಿದು ಕೊಂಡ ನಾವು 'ದರಿದ್ರ ದೇವೋಭವ' ಎಂದು ಹೃದಯ ತುಂಬಿ ಒಪ್ಪಿಕೊಂಡಿದ್ದೇವೆ. ನಿಜವಾಗಿಯೂ ನಮಗೆ ದರಿದ್ರನೇ ದೇವ. ಅವನ ಸೇವೆಯೇ ದೇವಾದಿ ದೇವನ ಸೇವೆ. ಅವನ ಸಂತೃಪ್ತಿಯೇ ನಮ್ಮ ತೃಪ್ತಿ. ಅವನ ಆನಂದವೇ ನಮ್ಮ ಆನಂದ. ಅಂತೆಯೇ ಸ್ವಾಮಿ ವಿವೇಕಾನಂದರು 'ದರಿದ್ರನೇ ನಾರಾಯಣ' ಎಂದು ಬರೆದು ಹಗಲಿರುಳು ಅವನ ಉದ್ಧಾರಕ್ಕಾಗಿ, ಹಿತಕ್ಕಾಗಿ, ಸುಖಕ್ಕಾಗಿ ಹೆಣಗಾಡಿದರು. ನಮ್ಮ ದೇಶದ ದರಿದ್ರನಾರಾಯಣನ ಉದ್ಧಾರವಾಗದಿದ್ದರೆ ದೇಶದ ಉದ್ಧಾರವಾಗದೆಂದು ಜಗದುದ್ದಕ್ಕೆ ಸುತ್ತಿ ಸಾರಿ ಬಂದರು. ಆ ಯುಗಪುರುಷ, ಆಧ್ಯಾತ್ಮ ಬಂಧು ಸ್ವಾಮೀಜಿ.

ಅದಕ್ಕಾಗಿಯೇ ಭೂಮಿಯ ಮೇಲೆ ಹುಟ್ಟಿ ಬಂದ ನಮಗೆ ಗುರು-ಹಿರಿಯರು, ತಂದೆ-ತಾಯಿ, ಬಂಧು-ಬಳಗ, ಸರಕಾರದ ಸೇವೆಯು ಹೇಗೆ ಅಗತ್ಯವೋ ಹಾಗೆಯೇ ದರಿದ್ರ ನಾರಾಯಣನ ಸೇವೆಯೂ ಅಷ್ಟೇ ಪ್ರಾಮುಖ್ಯವಾಗಿದೆ. ನಮ್ಮ ಸೇವೆಗೆ ಮೆಚ್ಚಿ 'ಬಡವ' ಸಂತೋಷದ ಉಸಿರು ಬಿಟ್ಟರೆ 'ದೇವ' ಆನಂದದ ಮಳೆಗರೆಯುತ್ತಾನೆ; ನಮ್ಮ ಮೇಲೆ ಅಂತೆಯೇ ವಿಶ್ವಕವಿ ರವೀಂದ್ರನಾಥಠಾಗೂರರು 'ಕತ್ತಲೆಯ ಕೋಣೆಯೊಳಗೆ ಸಂಪೂರ್ಣ ಕಣ್ಮುಚ್ಚಿ ಪೂಜಿಸುವ ಅರ್ಚಕನೆ ಬಾ ಹೊರಗೆ, ನೀನು ಪೂಜಿಸುತಿಹ ದೇವ ಒಳಗಿಲ್ಲಿ. ಹೊರಗಿಹನು ಖಂಡಿತ; ಸಾಕು ನಿನ್ನೀ ಜಪ; ಸಾಕು ನಿನ್ನೀ ಪೂಜೆ-ಪಠಣ; ಸಾಕು ನಿನ್ನೀ ಧ್ಯಾನ-ವಚನ; ದೇವ ಒಳಗಿಲ್ಲ ಬಾ ಹೊರಗೆ" ಎಂದು ಹೃದಯ ಕರಗಿ ನೀರಾಗುವಂತೆ ಹೇಳಿದ್ದಾರೆ.

ಯಾರು ಕೇವಲ ಪೂಜೆ-ಪಠಣ, ಮಂತ್ರ-ತಂತ್ರಗಳಲ್ಲಿ ಮುಳುಗಿ ಜನತೆಯತ್ತ ಬೆನ್ನು ಮಾಡಿ ಕಾಲ ಕಳೆಯುತ್ತಾರೆಯೋ ಮತ್ತು ಅದರಿಂದಾಗಿ ತೊಂದರೆಗಳಿಗೆ ಈಡಾಗುತ್ತಾರೋ ಅಂತಹ ಕೂಪ ಮಂಡೂಕರನ್ನು ಕುರಿತು ಸ್ವಾಮಿ ವಿವೇಕಾನಂದರು "ನಾವು ಕಲ್ಪಿತ-ಭಗವಂತನ ಬೆನ್ನು ಬೀಳುವುದೇಕೆ? ಮತ್ತು ನಮ್ಮ ಸುತ್ತಲೂ ಕಾಣುವ ಆವಿರಾಬ್ ಭಗವಾನ್ ಜನತಾ ಜನಾರ್ಧನರೂಪಿ ಭಗವಂತನನ್ನು ಪೂಜಿಸುವುದಿಲ್ಲವೇಕೆ? ನಾವು ಇವನ ಪೂಜೆ ಮಾಡೋಣ ನಂತರವೇ ಎಲ್ಲ ದೇವರನ್ನು ಪೂಜಿಸಬಲ್ಲೆವು" ಎಂದು ಸಿಂಹ ಗರ್ಜನೆ ಮಾಡಿದರು.

ನಿಜವಾಗಿಯೂ ಇಂದು ನಮ್ಮೆದುರು ಧುತ್ತೆಂದು ಬಂದು ನಿಂತುದುದೇ ವಂಶ ಪರಂಪರೆಯಾಗಿ ಬೆನ್ನು ಹತ್ತಿಬಂದ ಈ ದಾರಿದ್ರ್ಯ. ಈ ಈ ದಾರಿದ್ರ್ಯ ಮಾನವ ಶಕ್ತಿಗೆ ಮೀರಿದುದೇನಲ್ಲ. ದಾರಿದ್ರ್ಯವನ್ನು ಹೊಡೆದೋಡಿಸುವ ಮನ, ಶಕ್ತಿ, ಮಾನವನಲ್ಲಿ ಜಾಗೃತವಾದರೆ ಅಂದೇ ಜನತೆಯ ಕಲ್ಯಾಣ. ದೇಶಕ್ಕೆ ಕಲ್ಯಾಣ. ಆದುದರಿಂದ ನಾವೆಲ್ಲರೂ ಇಂದು ಹೆಗಲಿಗೆ ಹೆಗಲು ಹಚ್ಚಿ ಮಾನವರೆಲ್ಲರ ಕಲ್ಯಾಣ ಭಾವನೆಯನ್ನು ಹೃದಯದಲ್ಲಿಟ್ಟು ಉಚ್ಚ ಆದರ್ಶಗಳನ್ನು ಹೊತ್ತು ಮುಂದೆ ಸಾಗಿದರೆ ಜನ್ಮ ಜನ್ಮಾಂತರಗಳನ್ನು ಹುಡುಕಿಕೊಂಡು ಬೆನ್ನಟ್ಟಿ ಬಂದ ಬಡತನ ಮಾಯವಾಗುವುದು. ಈ ಕಾರ್ಯದಲ್ಲಿ ನಾವು ಸಫಲರಾಗುವುದೇ ನಿಜವಾದ ಅರ್ಥದಲ್ಲಿ ಭಗವಂತನ ಸೇವೆ. ಏಕೆಂದರೆ ಜನತಾ ಜನಾರ್ಧನನೇ ಭಗವಂತನ ನಿಜವಾದ ರೂಪ.

ಬಡತನದ ವಿರುದ್ಧ ಹೋರಾಟ. ಅಥವಾ 'ಬಡತನ ತೊಲಗಿಸಿ' ಎಂಬ ಬರೀ ಘೋಷಣೆ ಮಾಡಿದರೆ, ಭಾಷಣ ಬಿಗಿದರೆ ತೀರದು ಎಂದು ಬಗೆದು ನಮ್ಮ ಪ್ರಧಾನ ಮಂತ್ರಿಗಳು ಇಂದು ತಮ್ಮ ಅತ್ಯಮೂಲ್ಯವಾದ ಇಪ್ಪತ್ತು ಮಹತ್ವದ ಅಂಶಗಳನ್ನು ಮುಂದಿಟ್ಟುಕೊಂಡು ದಾರಿದ್ರ್ಯವನ್ನೇ ಹೊಡೆದೋಡಿಸಲು ಟೊಂಕ ಕಟ್ಟಿ ನಿಂತಿದ್ದಾರೆ. ಬಡತನದ ದವಡೆಯಲ್ಲಿ ಸಿಕ್ಕಿ ಮಿಲಿ ಮಿಲಿ ಒದ್ದಾಡುತ್ತಲಿದ್ದ ದರಿದ್ರನಾರಾಯಣನ ಆತ್ಮ ಸಂತೃಪ್ತಿಗಾಗಿ ಶ್ರಮಿಸುತ್ತಲಿದ್ದಾರೆ. ಅವರ ಈ ಕಾರ್ಯ ಫಲಿಸಲಿ, ಜನ್ಮ ಜನ್ಮಾಂತರಗಳಿಂದ ಬೆನ್ನಟ್ಟಿ ಈ ದುಃಖ, ದಾರಿದ್ರ್ಯ ನಿರ್ಮೂಲವಾಗಲಿ ಎಂದು ಬಯಸಿ, ಎಲ್ಲರೂ ಅದರ ಸಫಲತೆಗಾಗಿ ದುಡಿಯೋಣ-ಹೋರಾಡೋಣ. —







# ದೇವರು ಕಂಡ ಜಾತ್ರೆ

—ಅನ್ನದಾನಿ ಹಿರೇಮಠ

ಜೋಡ ಬಲೆಯಿಂದ ಜೀಡುಗಟ್ಟಿದ್ದ
ಜಾತ್ರೆಗೊಮ್ಮೆ ತೆಗೆವ ನನ್ನ
ಬೆಳ್ಳಿ ಮುಖವನ್ನು
ತೊಳೆದು ತೇರಿನಲ್ಲಿಟ್ಟರು.

"ಜಯನಮಃ ಪಾರ್ವತೀ ಪತೇ
ಹರಹರ ಮಹಾದೇವ"
ಜೈಜೈಕಾರ ಮೊಳಗಿತು
ತೇರು ಎಳೆಯಿತು।

ಅಮಲೇರಿದ ಶಹನಾಯಿಗಳು
ಮುಖಮೇಲೆತ್ತಿ
ಕಿರುಚುತ್ತಿದ್ದವು.
ಡೊಳ್ಳುಡಮರುಗಳೆಲ್ಲ
ಹರಿದರೂ ಖಬರಿಲ್ಲ
ಮುಗಿಲು ಮುಟ್ಟುವ ನನ್ನ
ನಂದೀಕೋಲು ನೆಲಮುಟ್ಟಿ ಮುರಿದಿತ್ತು.

ಅದೋ ನೋಡಲ್ಲಿ!
ಬಿದ್ದವು ಮೈಗೆ ಉದ್ದುದ್ದ
ಉತ್ತತ್ತಿ ಹಣ್ಣುಗಳು
ಎಂಥ ಅಗಾಧ ಭಕ್ತಿ ಈ ಜನರಲ್ಲಿ!

ಇವರ ಇಂಥ ಪ್ರಾಯದಲ್ಲಿ
ಆ ಹುಡುಗಿಯ ಉಡಿಯಲ್ಲೇ
ಉಡಿ ತುಂಬುವ ಹಂಬಲಕೆ
ಪಾಪ! ಕಣ್ಣೇ ಕಳೆಯಿತು
ಬದಿಗಿದ್ದ ಮುದುಕಿಯದು.
ಶಿವನ ಪ್ರಸಾದವೆಂದೇ
ಹರುಷಗೊಂಡ ಮುದುಕಿ
ಅವಸರದಿ ಉಡಿಯಲ್ಲೇ ತುಂಬಿಕೊಂಡಿತು.

ಅರೆ! ಈ ಕಡೆ ನೋಡಿಲ್ಲಿ;
ಹೊಸ ಜಂಪರೇ ಹರಿದು ಬಿದ್ದಿದೆಯಲ್ಲ ಇಲ್ಲಿ!
ಓಹ್! ಬಹುಶಃ ಅಕ್ಕಮಹಾದೇವಿಯದೇ!
ದಿಗಂಬರೆಯಾಗೇ ಬಂದಿಹಳಲ್ಲ ಇಲ್ಲೂ
ಅರೆ! ಎಷ್ಟೊಂದು ಕೌಶಿಕರು ಮುತ್ತಿಹರಲ್ಲ ಸುತ್ತಲೂ
ಬೇಡ! ನಾ ರಕ್ಷಿಸುವುದು ಬೇಡ ಈ ಸಂದರ್ಭದಲ್ಲಿ
ಹಿಡಿದು ಥಳಿಸಿಬಿಟ್ಟಾರು ನನ್ನನ್ನು!

ಅಯ್ಯೋ! ನಾ ಕುಳಿತ ಈ ತೇರಿಗೇನು ಬಂತು?
ಜೋಲಿ ಹೊಡೆಯುತ್ತಿದೆ
ತೇರ ಸುತಮುತ್ತ ಹಗ್ಗ ಬಿಗಿದು
ಎತ್ತೆತ್ತಲೊ ಎಳೆಯುತ್ತಿದ್ದಾರೆ ನನ್ನ
ಎಲ್ಲಿ ಈ ಉರಿವ ಉರಿಯಲ್ಲೇ
ಈ ಹೊಲಸು ಗಟಾರದಲ್ಲೇ
ಬೀಳಿಸಿ ಬಿಡುವರೇನೊ ?
ಹಾರಿ ಓಡುತ್ತೇನೆ ನಾ ಇಲ್ಲಿಂದ ಮೊದಲು!

—

# ಸಾಹಿತಿಯ ಕಷ್ಟ-ಸುಖ

— ಆರ್. ಸದಾನಂದ.

ಒಂದು ಕತೆ ಬರೆದೆ, ಒಂದು ಪತ್ರಿಕೆಗೆ ಕಳುಹಿಸಿದೆ-

ಒಂದೆರಡು ವಾರದ ನಂತರ ನನ್ನ ಕತೆ ಪ್ರಕಟವೂ ಆಗಿ ಬಿಡಬೇಕೆ?! ಸಂತೋಷಾತಿರೇಕದಿಂದ ಕುಣಿದೆ; ಕುಪ್ಪಳಿಸಿದೆ, ಎಗರಾಡಿದೆ, ಉಹುಂ! ಸಮಾಧಾನವಾಗಲೆ ಇಲ್ಲ! ಗೌರವ ಪ್ರತಿಯನ್ನು ಒಳಕ್ಕೆ ತೂರಿಸಿ ನನ್ನ ವಿಳಾಸವನ್ನು ಟೈಪ್ ಮಾಡಿ ಅಂಟಿಸಿದ್ದ ಕವರನ್ನು ಜಂಬದಿಂದ ಹೊತ್ತು ಕಾಲೇಜಿಗೆ ನಡೆದೆ.!

ನನ್ನ ಕತೆಯಿದ್ದುದೆಷ್ಟು ? ಇಪ್ಪತ್ತೇ ಸಾಲುಗಳು ! ಆದರೇನು ?

ಕತೆ ಕತೆಯೆ ಅಲ್ಲವೇ !

ಒಂದು ಆರ್ಡಿನರಿ ಲೆಟರಿನ ಮುಖವನ್ನೂ ಕಾಣದ ನನಗೆ ಕತೆ ಪ್ರಿಂಟಾಗಿ ಸೀದ ಕೈಗೇ ಬಂದರೆ ಹೇಗಾಗಿರಬೇಕು ?!

ಒಬ್ಬ ಮಿತ್ರ ಎದುರಾದ. ಕವರನ್ನು ಸೀದ ಮುಖಕ್ಕೆ ರಾಚಿದೆ, "ಎಲ್ಲೋ ಹುಚ್ಚನಿರಬೇಕು !! ಎಂದು ಸಣ್ಣಗೆ ನಗುತ್ತಾ ಆತ ಹೊರಟೆ ಬಿಡಬೇಕೆ?

ನನಗೆ ನಿರಾಶೆಯಾಯಿತು.

ಇನ್ನೊಬ್ಬ ಬಂದ. ಸುಮ್ಮನೆ ವಿಳಾಸವನ್ನು ಓದಿದ, ಹೋದ! ಕಿಡಿ ಕಿಡಿಯಾದೆ.

ನನ್ನಂತಹ ಸಾಹಿತಿ ಬರೆದ ಕತೆಗೆ ಒಂದಿಷ್ಟೂ ಪ್ರಾಮುಖ್ಯತೆ ಇಲ್ಲವೇ ?!

ನಾನು ಹೀರೇಕಾಯಿ ಮುಖ ಹಾಕಿ ಕೊಳ್ಳುವಷ್ಟು ಹೊತ್ತಿಗೆ, ಅತ್ಯಂತ ಆಪ್ತ ಮಿತ್ರ ಪ್ರತ್ಯಕ್ಷನಾದ! ಇವನಾದರೂ ಕತೇನ ಓದಬಹುದು ! ಎನ್ನುವ ಆಸೆಯಿಂದ ಕವರನ್ನು ತೋರಿಸಿದೆ.

ಎಂಕ, " ಹ ! ಹ ! ಹ ! ಹ ! ಅದ್ಯಾವ್ ಹುಚ್ಮುಂಡೆ ಮಗ ಓಗಿ ಓಗಿ ನಿನಗ್ ಕಳ್ಸವ್ನೆ ಪೋಸ್ಟ್ನ ?! " ಎಂದು ಗಹಗಹಿಸಿದಾಗ ಮಾತ್ರ ನಾನು ಪೂರಾ ತಣ್ಣಗಾದೆ !

* * * *

ಎಂಕ, ಮತ್ತು ನನ್ನ ದೋಸ್ತಿ ಕಾಫೀ ಎಂಬ ಕರೀ ಹಾಗೂ ಶತಾಂಶ ಐವತ್ತರಷ್ಟು ಜೊಳ್ಳಿದ್ದ ಅದ್ಭುತ ಕಳ್ಳೇಕಾಯಿಗಳ ಮೂಲಕ ಬಲವಾಗುತ್ತಲೇ ನನ್ನ ಕೆಲವು ಕತೆಗಳನ್ನು ಓದಲು ಕೊಟ್ಟೆ.

" ಏನೋ ಪಾಪ, ಕೊಟ್ಟವ್ನೆ, ಮಿತ್ರ' ! ಎಂದು ಎಂಕನೂ ಓದಿದ. ಎಂಗವೆ ನನ್ ಕತೆಗೋಳು.... ? " ಎಂಕನನ್ನು ಪಶ್ನಿಸಿದೆ. "ಬೋ ಐಕ್ಲಾಸಾಗವೆ ! ಇಂತಾ A-1 ಕತೆಗಳ್ನ ಹಿಂದೆ ಓದಿರ್ಲಿಲ್ಲ, ಮುಂದೆ ಓದೋದೂ ಇಲ್ಲ ! ಆದ್ರೆ ......... "

" ಏನು ಆದ್ರೆ.... ? "

" ಪಿರಿಂಟ್ ಮಾತ್ರ ಮಾಡಿಸ್ಬ್ಯಾಡ, ಅಷ್ಟೆ!

* * * * * *

ಎರಡು ದಿನದ ನಂತರ ಮತ್ತೆ ವಕ್ರಿಸಿದ ಎಂಕ,

" ಗೊತ್ತಾ ನಿನ್ಗೆ.... ? "

" ಏನು.... ? "

ಹೊಸ್ದಾಗ್ ರೂಮ್ ಮಾಡಿವ್ನಿ ! "

ಅದಕ್ ನಾನೇನ್ ಮಾಡ್ಲಿ .... ? "

ಎಂಕ ಅರೆಕ್ಷಣ ತೆಪ್ಪಗಾದ

ಎರಡು ವಾರದ ನಂತರ ಮತ್ತೆ ಬಂದ,

" ಇಂಗಾದ್ರೆಂಗೆ.... ? "

" ಎಂಗಾದ್ರೆಂಗೆ ?.... ! "

" ಅಲ್ಲಾ, ಒಂದು ಆರ್ಡಿನರಿ ಲೆಟರ್ ಆದ್ರೂ ಬ್ಯಾಡ್ವ ನನ್ ಮುಖಕ್ಕೆ ! "

' ನಿಜ ! ನಿಜ ! ಯಾತಕ್ ಬೇಕು ? ! ಎಂದುಕೊಂಡೆ.

"ಅಲ್ಲಾ ಮಾರಾಯ, ಇಂಗೇ ಆದ್ರೆ ಪೋಸ್ಟ್‌ಮೆನ್ ' ಎಂಕಾ ಅಂದ್ರೆ ಯಾರು ? ' ಅಂತೆ ತಿಳ್ಕಳಾದೆಂಗೆ ? "

ಪಾಪ ! ಬೇರೆ ಪ್ರದೇಶದಿಂದ ಎಂಕ ತನಗೆ ತಾನೇ ಬರೆದ ಪತ್ರವೂ ಇಲಾಖೆಯವರ ಕೃಪೆಯಿಂದ ಅವನ ಕೈ ಸೇರಿರಲಿಲ್ಲ !

ಕೊನೆಗೆ ಅವನನ್ನು ಸಮಾಧಾನ ಪಡಿಸಿ ನಾನು ಹೊಸದಾಗಿ ಬರೆದ ' ಸಮಾಧಾನ ! ' ಕತೇನ ಕೊಟ್ಕಳುಸ್ದೆ !

ನಾಕೇ ದಿನದಲ್ಲಿ ಎಂಕ ಹಾಜರ್ !

" ಕೊನೆಗೂ ಸಾಧಿಸ್ದೆ.... ! "

" ಏನ್ನ.... ? "

ನನ್ ವಿಳಾಸದ್ ಒಂದು ಕಾಗ್ದಾನಾರೂ ಬರ್ಬೇಕೂಂಬೋ ಹಟಾನ.... ! "

" ಎಲಾ ನಿನ್ನ ಮನೆ ಹಾಳಾಗ ! ಏನ್ ಕರಾಮತ್ ಮಾಡ್ದೆ ....? !

" ಹ್ದೆ ! ಹ್ದೆ.... ! ಏನೂ ಇಲ್ಲಾ .... ಭಾಳ ಸುಲಭ. ನೀನು ಕೊಟ್ಟದ್ಯಲ್ಲಾ ಕತೆ.... ? "

ಊಂ.... ! ಕೊಟ್ಟದ್ದೆ ! ಕತೆ ಅನ್ನುತ್ಲೂ ಜಾಗೃತನಾದೆ.

ಅದನ್ನೇ ನೀಟಾಗಿ ಕಾಪಿವಡ್ದು, ನನ್ನೆಸ್ರು, ನಂದೇ ಇಳಾಸ ಆಕಿ ' ರೊಂಯ್ಯ್ ! ' ಅಂತ ಕಳುಸ್ದೆ ! '

" ಆ್ಞ ! ಆಮೇಲೇನಾಯ್ತು ?........ "

" ಇನ್ನೇನಾತೈತೆ ! ನಾ ಅಂದ್ಕಂಡಂಗೇ 'ಟೊಂಯ್' ಅಂತ ವಾಪಿಸ್ ಬತ್ತು ! ಪೋಸ್ಟ್‌ಮೆನ್ ಪರಿಚಯಾನೂ ಆತು.... ! "

" ಆ್ಞ........ ! "

* * * *

ಎಂಕನ ಸಹವಾಸದಿಂದ ಬೇಸತ್ತು ಹೋಗಿ ಮಲಗಿಕೊಂಡೆ. ರಾತ್ರಿ ! ಮಲೀಕಳ್ದ, ಸೊಳ್ಳೆ ಒಡ್ಯೋ ಕಾಯ್ತದ....? ¡ ಅಂತ ಕೇಳ್ಬೇಡಿ ಮತ್ತೆ !

ಸುಡುಗಾಡು ಕನಸು.

ನಾನು ಶತಮಾನದ ಅಪೂರ್ವ ಕಲಾಕಾರ ! ಅತ್ಯುತ್ತಮ 'ಸಾಹಿತಿ' ಅರ್ಥಾತ್ 'ನಾಟಕಕಾರ ! '

ಬೆಳಗ್ಗೆ ಹೇಳುತ್ತಿದ್ದಂಗೆ ಪಿಯೋನು(phone)ಬಂತು

" ಸಾಯ್ತೀ ಗೋಳ್ ಐದುರಾ ? '

" ನಮುಚ್ಕಾರ ! ನಾನೇ ಸಾಯ್ತಿ ! ತಾವ್ಯಾರು....?"

" ಹ ! ಹ ! ಹ ! ಹ ! " ಮಾತಾಡೋ ಪೆಕರ ! ಅಂತಂದ್ರೆ ಹುಚ್ನಂಗ್ ನಕ್ಕ; ಸುಸ್ತಾದ್ ಮ್ಯಾಲೆಯೋಳ್ದ,

" ಹ ! ಹ ! ನಾನ್ಯಾರ್ ಗೊತ್ತೊ.... ? " ಮೀಸೆ ತಿರುವಿ ಕೊಶ್ಚನಿಸಿದ.

" ಹಯ್ಯೋ ! ತಿಳ್ದಿದ್ರೆ ಕೇಳ್ತಿದ್ನ ತಾವ್ಯಾರೂಂತ ?! ನಾನೂ ಕೊಶ್ಚನಿಸಿದೆ.

" ಹ ! ಹ ! ಹ ! ನಾನ್ಯಾರು ಗೊತ್ತೆ ? ಸುಪ್ರಸಿದ್ಧ ಕಾದಂಬರಿಕಾರ !

" ಇರ್ಬೈದು. ಅದಕ್ಕ ನಾನೇನ್ ಮಾಡೂಣಂತೀರಿ....?

" ಏನೂ ಇಲ್ಲ... ಹಾಂ ! ಒಂದು ಒಂದು ವಿಸಯ, ನೋಡಿ, ನೀವು ನೂರು ಚಿಕ್ಕ ಚಿಕ್ಕ ಬರದ್ರೆ ನಾವು ನಾನು ನೂರು ದೊಡ್ಡ ದೊಡ್ಡ ಕಾದಂಬರಿಗಳನ್ನೇ ಬರೆಯಬಲ್ಲೆ ! ಹ ! ಹ ! ಹ ! "

" ಹ ! ಹ ! ಹ ! ಯಾರ್‍ಯಾರಿಗ್ ಯಾ ವ್ಯಾವ್ದ ಬರೋಲ್ವೋ ಅವ್ರು ಅದನ್ನ ಬರ್‍ಯೋಕ್ ಪ್ರಯತ್ನಿಸೋದು ತೀರಾ ಸಹಜ.... ! " ತತ್‌ಕ್ಷಣ ಚುರುಕು ಮುಟ್ಟಿಸಿದೆ.

ವಾಟ್ ? .... ವಾಟ್ ? .... " ಅಂವ ಕಕವನಂತೆ ಕಣ್ ಕಣ್ ಬಿಟ್ಟ. ವಾಟೂ ಇಲ್ಲ ! ವೀಟೂ ಇಲ್ಲ ! ನಾನು ಹೇಳಿದ್ದಾತು ! ಅವ್ನು ಕೇಳಿದ್ದೂ ಆಯ್ತು ! ಇನ್ನೇನಿದೆ ? ಮತ್ತೆ ಕೇಳಿದೊಂದೇ ಒಂದು.... ,

ಅತ್ತ ಕಡೆಯಿಂದ ಫೋನ್ ಬಿದ್ದ ಶಬ್ದ.......! ! —

[ಮುಂದುವರಿದ ಲೇಖನ]

# ನಮ್ಮ ರೈತ ಅಂದು-ಇಂದು

—ಡಿ. ವೆಂಕಟರಾವ್.

## ನಿರುದ್ಯೋಗ ನಿವಾರಣೆ

ನಮ್ಮ ದೇಶದಲ್ಲಿ ಅತಿ ಉದ್ಯೋಗ ಹಾಗೂ ಮರೆಮಾಚಿದ ನಿರುದ್ಯೋಗ ಹೆಚ್ಚು. ಕೃಷಿ ಮಾಡುವವರರಲ್ಲಿ ಮೂರನೇ ಎರಡಕ್ಕಿಂತಲೂ ಕಡಿಮೆ ಜನರಿಗೆ ಕೆಲಸವಿರುತ್ತದೆ. ಉಳಿದವರು ದುಡಿಯುವ ವರನ್ನು ಆಶ್ರಯಿಸಿ ಬದುಕುವರು. ಕೃಷಿಯಲ್ಲಿ ಕೆಲಸಗಳನ್ನು ಹೆಚ್ಚಿಸುವುದೂ ಕಷ್ಟ. ಆದ್ದರಿಂದ ನಮ್ಮ ಯೋಜನೆಗಳ ಅವಧಿಯಲ್ಲಿ ಅಣೆಕಟ್ಟು, ಕಾರ್ಖಾನೆ, ಸೇತುವೆ ನಿರ್ಮಾಣ, ಮನೆ, ಶಾಲೆ, ರಸ್ತೆ, ಆಸ್ಪತ್ರೆ ಇತ್ಯಾದಿಗಳ ಕಾರ್ಯಗಳಲ್ಲಿ ಸಾವಿರಾರು ರೈತ ಜನರಿಗೆ ಉದ್ಯೋಗಗಳನ್ನು ಒದಗಿಸಲಾಗಿದೆ. ಕೃಷಿಯ ಮೇಲಿನ ಅಧಿಕ ಒತ್ತಡವನ್ನು ಕಡಿಮೆ ಮಾಡಲು ರೈತರನ್ನು ಕೈಗಾರಿಕೆಗಳಿಗೆ ವರ್ಗಾಯಿಸಲಾಗುತ್ತಿದೆ. ಜೊತೆಗೆ ಬಿಡುವಿನ ಸಮಯದಲ್ಲಿ ಕೈಗೊಳ್ಳಲು ರೈತರಿಗೆ ಉಪ ಕಸುಬುಗಳನ್ನು ಮಾಡಿ ಕೊಡಲಾಗುತ್ತಿದೆ. ಯೋಜನಾವಧಿಯಲ್ಲಿ ಗ್ರಾಮ ಕೈಗಾರಿಕೆಗಳ ಅಭಿವೃದ್ಧಿಗೆ ಹೆಚ್ಚಿನ ಆದ್ಯತೆಯನ್ನು ಕೊಡಲಾಗುತ್ತಿದೆ.

## ಕುಡಿಯುವ ನೀರಿನ ಪೂರೈಕೆ

ಸ್ವಾತಂತ್ರ್ಯ ನಂತರ ನಮ್ಮ ದೇಶದಲ್ಲಿ ರೈತರಿಗೆ ಶುದ್ಧವಾದ ನೀರನ್ನು ಪೂರೈಸಲು ಅನೇಕ ಯೋಜನೆಗಳನ್ನು ರೂಪಿಸಲಾಯಿತು. ಇದರಿಂದಾಗಿ ಇಂದಿನ ರೈತರ ಆರೋಗ್ಯ ಸುಧಾರಿಸಲು ಕಾರಣವಾಗಿದೆ.

## ಸಮಾಜ ವಿಕಾಸ:

ಸ್ವಾತಂತ್ರ್ಯ ಪಡೆದ ನಂತರ, ಹಳ್ಳಿಗಳ ಮತ್ತು ರೈತರ ಸರ್ವತೋಮುಖ ಪ್ರಗತಿಗಾಗಿ ಸರಕಾರವು ಒಂದು ಉನ್ನತ ಧ್ಯೇಯದ ಯೋಜನೆಯನ್ನು 1952 ನೇ ಅಕ್ಟೋಬರ್ 2 ರಂದು ರೂಪಿಸಿದೆ. ಅದೇ ಸಮಾಜ ವಿಕಾಸ ಯೋಜನೆ. ರೈತರಲ್ಲಿ ಉದಾತ್ತ ಮನೋಭಾವವನ್ನು ಮೂಡಿಸುವುದು, ಕೃಷಿ ಉತ್ಪನ್ನವನ್ನು ಅಧಿಕಗೊಳಿಸುವುದು, ಹಳ್ಳಿಗಳಲ್ಲಿ ಉದ್ಯೋಗಾವಕಾಶಗಳನ್ನು ಹೆಚ್ಚಿಸುವುದು; ರೈತರ ಯಶಸ್ಸಿಗೆ ಪೂರಕವಾಗುವ ಸಾಮಾಜಿಕ ವಾತಾವರಣವನ್ನು ಸೃಷ್ಟಿಸುವುದು, ರೈತರನ್ನು ಸ್ವಾವಲಂಬಿಗಳನ್ನಾಗಿ ಮಾಡುವುದು ಇವೇ ಮೊದಲಾದ ಉದ್ದೇಶಗಳನ್ನು ಈ ಯೋಜನೆಯು ಹೊಂದಿದೆ. ಈ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರಲು ಕೋಟ್ಯಾಂತರ ರೂಗಳನ್ನು ವ್ಯಯ ಮಾಡಲಾಗುತ್ತಿದೆ.

ಇದರಿಂದಾಗಿ ಇಂದು ಹಳ್ಳಿಗಳ ಹಾಗೂ ರೈತರ ಸ್ವರೂಪವೇ ಬದಲಾಗಿದ್ದು ಕ್ರಾಂತಿಕಾರಕ ಮಾರ್ಪಾಡುಗಳಾಗಿವೆ. ಈ ಯೋಜನೆಯ ಫಲವಾಗಿ ಕೃಷಿ ಉತ್ಪನ್ನ ಎಷ್ಟೋ ಪಾಲು ಹೆಚ್ಚಾಗಿದೆ. ರೈತರ ಜೀವನ ಮಟ್ಟ ಮೊದಲಿಗಿಂತಲೂ ಬಹಳ ಮಟ್ಟಿಗೆ ಸುಧಾರಿಸಿದೆ.

## ಪಂಚಾಯಿತಿಗಳು:

ಇಂದಿನ ಹಳ್ಳಿಗಳ ಆರ್ಥಿಕ ಅಭಿವೃದ್ಧಿಯಲ್ಲಿ ಪಂಚಾಯತಿಗಳು ಬಹಳ ಮುಖ್ಯ ಪಾತ್ರ ವಹಿಸುತ್ತಿವೆ. ರೈತರ ಕುಂದುಕೊರತೆಗಳನ್ನು ನಿವಾರಿಸಿ, ಅವರ ಹಾಗೂ ಹಳ್ಳಿಗಳ ಅಗತ್ಯಗಳ ಕಡೆ ಸಂಪೂರ್ಣ ಗಮನ ಹರಿಸಿ, ಗ್ರಾಮೀಣ ಅಭಿವೃದ್ಧಿಗಾಗಿ ನಿರಂತರವಾಗಿ ಶ್ರಮಿಸುತ್ತಿವೆ.

ಈ ರೀತಿ ಸ್ವಾತಂತ್ರ್ಯ ಪೂರ್ವದಲ್ಲಿನ ರೈತರಿಗೂ, ಸ್ವಾತಂತ್ರ್ಯನಂತರದ ರೈತರಿಗೂ ಅಜಗಜಾಂತರ ವ್ಯತ್ಯಾಸವಿದೆ. ಇಂದಿನ ರೈತರು ಅನೇಕ ಹಿಂದಿನವರಿಗೆ ದುರ್ಲಭವಾಗಿದ್ದ ಸೌಲಭ್ಯಗಳನ್ನು ಪಡೆದಿದ್ದು ಸುಖೀ ಬದುಕನ್ನು ನಡೆಸುತ್ತಿದ್ದಾರೆ. ಇದರಿಂದಾಗಿ ಅವರ ಆರ್ಥಿಕ ಸ್ಥಿತಿ ಮೊದಲಿಗಿಂತ ಎಷ್ಟೋ ಉತ್ತಮಗೊಂಡಿದೆ. ಅವರು ದಿನದಿನಕ್ಕೂ ಪ್ರಗತಿಶೀಲರಾಗುತ್ತಿದ್ದು, ಯಶಸ್ಸಿನ ಹಾದಿಯತ್ತ ಹೆಜ್ಜೆ ಇಡುತ್ತಿದ್ದಾರೆ. ಹಿಂದಿನ ಕಾಲದ ರೈತರ ಬಯಕೆಗಳಿಗೆ ಒಂದು ಮಿತಿ ಇದ್ದಿತು. ಆಗ ಕಾಲವೂ ಮುಂದುವರಿದಿರಲಿಲ್ಲ. ಆದರೆ ಇಂದಿನ ಬಾಹ್ಯಾಕಾಶ ಯುಗದಲ್ಲಿ ರೈತರು ಕ್ರಮೇಣ ನಾಗರೀಕತೆಯನ್ನು ಮೈಗೂಡಿಸಿಕೊಳ್ಳುತ್ತಿದ್ದಾರೆ. ಇಂದು ವೈಜ್ಞಾನಿಕ ಪ್ರಗತಿ ಮುಂದುವರಿದಂತೆಲ್ಲಾ, ಸಾಮಾಜಿಕವಾಗಿಯೂ ಹಾಗೂ ಆರ್ಥಿಕವಾಗಿಯೂ ರೈತರ ಬದುಕು ಹೆಚ್ಚು ವಿಕಾಸಗೊಳ್ಳುತ್ತಿದೆ. ಅಂತೆಯೇ ಅವರ ಬಯಕೆಗಳೂ ದಿನೇ ದಿನೇ ಬೆಳೆಯುತ್ತಿವೆ. ಇದರಿಂದಾಗಿ ನಮ್ಮ ರೈತರು ಪ್ರಗತಿಯ ಮೆಟ್ಟಲುಗಳನ್ನು ಏರುತ್ತಿರುವಷ್ಟೇ ವೇಗದಲ್ಲಿ ಅಧೋಗತಿಯ ಪ್ರಪಾತದಲ್ಲಿ ಬೀಳಲಾರಂಭಿಸಿದ್ದಾರೆ. ಒಂದು ಮುಖವಾಗಿ ಅವರ ಬದುಕು ಸುಧಾರಣೆ ಗೊಳ್ಳುತ್ತಿದ್ದರೆ ಮತ್ತೊಂದು ಮುಖವಾಗಿ ಅವರ ಬದುಕು ಕಂಗೆಡುತ್ತಲೂ ಇದೆ. ಇಂದಿನ ರೈತರು ಆರ್ಥಿಕವಾಗಿ ಉತ್ತಮವಾಗಿರುವಂತೆ ತೋರುತ್ತದೆ. ಈಗ ಅವರಲ್ಲಿ ಹಣದ ಡೌಲು ಹೆಚ್ಚಾಗಿದೆ. ಆಹಾರ, ಬಟ್ಟೆ, ಕುಡಿತ, ಲಾಟರಿ, ಜೂಜಾಟ, ಕೋರ್ಟಿನ ಸಣ್ಣ ಸಣ್ಣ ವ್ಯಾಜ್ಯಗಳಿಗೂ ಅವರು ಹೆಚ್ಚು ಹೆಚ್ಚು ಖರ್ಚು ಮಾಡುತ್ತಿದ್ದಾರೆ. ಹುಲ್ಲುಗುಡಿಸಲುಗಳಿದ್ದೆಡೆ, ಈಗ ರೈತರು ಹೆಂಚಿನ ಮನೆಗಳನ್ನು ಕಟ್ಟಿಕೊಂಡು ಆರಾಮವಾಗಿದ್ದಾರೆ. ಇಂದು ಟ್ರಾನ್ಸಿಸ್ಟರ್, ಗಡಿಯಾರ, ಛತ್ರಿಗಳಿಲ್ಲದ ರೈತರು ಬಹಳ ಅಪರೂಪ. ಆದರೆ ಇದೆಲ್ಲವೂ ಕೇವಲ ತೋರಿಕೆಯಷ್ಟೇ. 'ಒಳಗೆ ಹುಳುಕು, ಮೇಲೆ ಥಳಕು' ಎನ್ನುವಂತೆ ಬರಿಯ ಆಡಂಬರ. ಅವರಿಗೆ ಸಿಗುತ್ತಿರುವ ನಾನಾ ವಿಧದ ಸಾಲಗಳಿಂದ ಮೇಲು ನೋಟಕ್ಕೆ ರೈತರ ಕೈಯಲ್ಲಿ ಹಣದ ಓಡಾಟ ಕಂಡರೂ ಆರ್ಥಿಕ ದುಸ್ಥಿತಿ ಹಾಗೆಯೇ ಉಳಿದಿದೆ ಎನ್ನಬಹುದು. ಬ್ರಿಟಿಷರ ಕಾಲದಿಂದ ಪ್ರಸಿದ್ಧವಾಗಿರುವ ನಮ್ಮ ರೈತರ ದಾರಿದ್ರ್ಯದಲ್ಲಿ ಏನೂ ಬದಲಾವಣೆಯಾಗಿಲ್ಲ ಹಿಂದೆ ಹತ್ತಾರು ಮೈಲಿಗಳನ್ನು ಪ್ರಯಾಸವಿಲ್ಲದೆ ನಡೆಯುತ್ತಿದ್ದ ನಮ್ಮ ರೈತರು ಇಂದು ಒಂದೆರಡು ಮೈಲಿಗೂ ಕಾದು ಬಸ್ಸಿಗೆ ಹಣ ತೆರುವುದು ಸಾಮಾನ್ಯವಾಗಿದೆ. ಅವರು ಉಪಯೋಗಿಸುವ ಬಟ್ಟೆ ಬರೆಗಳು, ಇತರ ಸಾಧನ ಸಾಮಗ್ರಿಗಳು ಕೂಡ ಹಣದ ಹೆಚ್ಚು ವೆಚ್ಚಕ್ಕೆ ಕಾರಣಗಳಾಗಿವೆ. ಆದರೆ ಅವರ ಸಂಪಾದನೆ ಮಾತ್ರ ಇದ್ದಂತೆಯೇ ಇದೆ. ಸೌಲಭ್ಯಗಳು ಹೆಚ್ಚಿದಷ್ಟೂ ಅವರು ವಿಶೇಷ ಸೋಮಾರಿಗಳಾಗಿ ಬಡತನದಲ್ಲಿ ವ್ಯರ್ಥ ಕಾಲಕ್ಷೇಪ ಮಾಡುತ್ತಿದ್ದಾರೆ. ಆದಾಯ ಕಡಿಮೆ ಇದ್ದು ವೆಚ್ಚ ಅತಿಯಾಗಿ ಹೆಚ್ಚಿರುವುದರಿಂದ ಅವರ ಬಡತನ ತೊಲಗುವುದು ಅಸಾಧ್ಯವಾಗಿದೆ. ಹೀಗಾಗಿ ರೈತರು ತಮ್ಮ ಅಸಾಧಾರಣ ಆಶಯಗಳನ್ನು ಪೂರ್ತಿಮಾಡಿಕೊಳ್ಳಬೇಕಾದರೂ ಸಾಲ ಮಾಡುವುದೊಂದೇ ದಾರಿಯಾಗಿದೆ. ಈ ದಿಸೆಯಲ್ಲಿ ಎಷ್ಟೇ ಸೌಲಭ್ಯಗಳು ದೊರೆತಿದ್ದರೂ ಇಂದಿಗೂ ಹಳ್ಳಿಗಳಲ್ಲಿ ಸಾಹುಕಾರರ ಪ್ರಾಬಲ್ಯ ಮಾತ್ರ ಕಡಿಮೆಯಾಗಿಲ್ಲ. ಇವರೇ ರೈತರ ಹಣದ ಜೀವಾಳ. ಸರಕಾರವಾಗಲೀ, ಬ್ಯಾಂಕುಗಳಾಗಲೀ, ಸಹಕಾರ ಸಂಸ್ಥೆಗಳಾಗಲೀ ರೈತರಿಗೆ ಅನುತ್ಪಾದಕ ವೆಚ್ಚಗಳಿಗೆ ಸಾಲ ಕೊಡುವುದಿಲ್ಲ. ಸಾಹುಕಾರರಾದರೆ ರೈತರ ಮನೆಯಲ್ಲಿ ನಡೆಯುವ ಮುಂಜಿ, ನಾಮಕರಣ, ಮದುವೆ, ಹಬ್ಬ ಹರಿದಿನಗಳ ವೆಚ್ಚಕ್ಕೆ ಸಾಲ ಕೊಡುತ್ತಾರೆ. ರೈತರು

..................ಇಲ್ಲಿಯವರೆಗೆ

ಸ್ವಾತಂತ್ರ್ಯನಂತರ ರೈತರಿಗೆ ಸಿಗುತ್ತಿರುವ ಸೌಲಭ್ಯಗಳು ಹಲವಾರು. ಅವುಗಳಲ್ಲಿ ನೀರಾವರಿ, ಯಾಂತ್ರೀಕೃತ ಬೇಸಾಯ, ಸಾರಿಗೆ ಸೌಲಭ್ಯ, ಶಿಕ್ಷಣ ಮುಂತಾದವು. ವಿದ್ಯುತ್ ಸೌಲಭ್ಯದಿಂದ ನೀರಾವರಿ ಸೌಲಭ್ಯವೂ ಹೆಚ್ಚಿರುವುದು ಗಮನಾರ್ಹವಾಗಿದೆ.

ಇನ್ನೂ ಮುಂದೆ ಓದಿ..................

ಹೊಟ್ಟೆಗೆ ತಿನ್ನಲು ಏನೂ ಇಲ್ಲದಿದ್ದರೂ, ಸಾಲಮಾಡಿ ಇವನ್ನು ನೆರವೇರಿಸುತ್ತಾರೆ. ಈ ದುಂದುಗಾರಿಕೆಯಿಂದಾಗಿ ನಮ್ಮ ರೈತರ ಬಡತನ ದಿನೇ ದಿನೇ ಹೆಚ್ಚುತ್ತಿದೆ. ಅಲ್ಲದೆ ಅನಾವಶ್ಯಕವಾದ ದುಂದುಗಾರಿಕೆಯಿಂದಾದ ಸಾಲವು ಇಂದಿನ ರೈತರನ್ನು ಬೆಂಕಿಯಂತೆ ಸುಡುತ್ತಿದೆ.

ಹಿಂದೆ ಒಗ್ಗಟ್ಟಿನಿಂದ ಕೆಲಸ ಮಾಡುತ್ತಿದ್ದ ರೈತರು ಈಗ ದ್ವೇಷಾಸೂಯೆಗಳಿಂದ ವ್ಯಾಜ್ಯ ವ್ಯವಹಾರ ನಿರತರಾಗಿ ಕಷ್ಟಕ್ಕೀಡಾಗುತ್ತಿದ್ದಾರೆ. ಹಿಂದೆ ಸಂಪ್ರದಾಯ ಬದ್ಧರಾಗಿದ್ದ ರೈತರಲ್ಲಿ ಇಂದು ಸುಳ್ಳು, ಮೋಸಗಳು ಮನೆ ಮಾಡಿವೆ. ಬಡತನ ಬಹಳ ಕೆಟ್ಟದು. ಅದು ಮನುಷ್ಯರಿಂದ ಮಾಡಬಾರದ ಕೆಲಸಗಳನ್ನು ಮಾಡಿಸುತ್ತದೆ ಆದುದರಿಂದಲೇ ಅದನ್ನು ಆರನೇ ಪಾತಕವೆಂದು ಕರೆದಿದ್ದಾರೆ. ಬಡತನ ಮನಷ್ಯನ ನೈತಿಕತೆಗೆ ಸವಾಲನ್ನು ಹಾಕುತ್ತದೆ. ಆದರೆ ಸುಳ್ಳು, ಮೋಸಗಳು ಇನ್ನೂ ಕೆಟ್ಟದು. ಅವು ಅವನನ್ನು ಮೇಲೇಳಲಾರದಷ್ಟು ಆಳದ ಪ್ರಪಾತಕ್ಕೆ ತಳ್ಳಿ ಬಿಡುತ್ತದೆ. ಇಂದು ನಮ್ಮ ರೈತರ ಸ್ಥಿತಿಯೂ ಹೀಗೇ ಆಗಿದೆ. ಶಿಸ್ತಿನ ಜಾಗದಲ್ಲಿ ಇಂದು ಅನಾಯಕತ್ವ ಏರ್ಪಟ್ಟಿದೆ. ಸಹನೆ, ಅಭಿಮಾನಾನ್ಯೋನ್ಯತೆ ಸಹಕಾರಗಳು ಮಾಯವಾಗಿವೆ. ಅವರಲ್ಲಿ ಇಂದು ಜವಾಬ್ದಾರಿಯಂತೂ ಎಳ್ಳಷ್ಟೂ ಕಂಡುಬರುತ್ತಿಲ್ಲ. ನಮ್ಮ ರೈತರಲ್ಲಿ ಇಂದು ಕಾಣುತ್ತಿರುವ ಮತ್ತೊಂದು ದುಃಖಕರ ಅಂಶವೆಂದರೆ ಕುಡಿತದ ಹಾವಳಿ. ಇದು ಅವರನ್ನು ದಿನದಿನಕ್ಕೂ ಅಧಃಪತನದತ್ತ ನೂಕುತ್ತಿದೆ. ರೈತರು ಬೆಳೆದ ಧಾನ್ಯಗಳಿಗೆ ಹಣ ಹೆಚ್ಚಾಗಿ ಬರುವಂತೆ ತೋರುತ್ತದೆಯೇ ಹೊರತು ಅವರು ಕೊಳ್ಳುವ ಎಲ್ಲಾ ಪದಾರ್ಥಗಳ ಬೆಲೆ ಹೆಚ್ಚಿರುವುದರಿಂದ ಅವರ ಸ್ಥಿತಿ ಉತ್ತಮಗೊಂಡಿಲ್ಲ. ಇಂದಿನ ರೈತರಲ್ಲಿ ಸ್ವಾವಲಂಬನಾಶಕ್ತಿ ಮತ್ತು ಸ್ವಪರಿಪೂರ್ಣತೆಯ ಧೈರ್ಯ ನಶಿಸುತ್ತಿದೆ. ಈಗ ಪ್ರತಿ ಕೆಲಸಕ್ಕೂ ಇತರರ ಕೈಕಾಯುವರು. ತಮ್ಮ ಕೆಲಸವನ್ನು ತಾವೇ ಮಾಡಿಕೊಳ್ಳಬೇಕೆಂಬ ತತ್ವವನ್ನು ಇಂದಿನ ರೈತರು ಸಂಪೂರ್ಣವಾಗಿ ಮರೆತಿದ್ದಾರೆ. ಎಲ್ಲವನ್ನೂ ಸರ್ಕಾರದವರೇ ಮಾಡಲಿ ಅನ್ನುವ ತಪ್ಪು ಭಾವನೆಯು ಅವರಲ್ಲಿ ಬೇರೂರಿ ಬಿಟ್ಟಿದೆ. ಇದರಿಂದಾಗಿ ನಮ್ಮ ಊರು, ನಮ್ಮ ಗ್ರಾಮದ ಕೆಲಸ ಎಂಬ ಮಮತೆಯೇ ಮಾಯವಾಗಿ ಪ್ರತಿಯೊಂದು ಕೆಲಸಕ್ಕೂ ಸರ್ಕಾರದ ಕೈ ಕಾಯಬೇಕಾದ ನಿರ್ಬಲ ಸ್ಥಿತಿಯು ಬಂದೊದಗಿದೆ. ಇತ್ತೀಚೆಗಂತೂ ರೈತರು ಪಟ್ಟಣಗಳ ಮೋಹದಲ್ಲಿ ಬಿದ್ದು, ಹಳ್ಳಿಗಳನ್ನು ತ್ಯಜಿಸಲಾರಂಭಿಸಿದ್ದಾರೆ. ಅದರಲ್ಲೂ ಇಂಗ್ಲೀಷ್ ವಿದ್ಯಾಭ್ಯಾಸ ಮಾಡಿದ ರೈತರ ಮಕ್ಕಳು ಹಿಂದಿನ ಆಚಾರ, ಸಂಸ್ಕೃತಿಗಳನ್ನು ಉಪೇಕ್ಷೆ ಮಾಡಿ ಹಳ್ಳಿಗಳಿಂದ ಪಟ್ಟಣಗಳಿಗೆ ವಲಸೆ ಹೋಗುತ್ತಿರುವುದು ನಿಜಕ್ಕೂ ದುರ್ದೈವದ ಸಂಗತಿ. ಇದರಿಂದಾಗಿ ಹಳ್ಳಿಗಳಲ್ಲಿ ಯೋಗ್ಯ ನಾಯಕರಿಗೆ ಇಂದು ಅಭಾವವಿದ್ದು ರೈತರಲ್ಲಿ ವ್ಯಾಜ್ಯ ವ್ಯವಹಾರಗಳು ಹೆಚ್ಚಾಗಿವೆ. ಪ್ರೀತಿ, ಸ್ನೇಹ, ಸೌಹಾರ್ಧತೆಗಳಿಗೆ ಬದಲಾಗಿ ದ್ವೇಷ, ಅಸೂಯೆಗಳು ಹೆಚ್ಚುತ್ತಿವೆ. ಇಂದಿನ ನಮ್ಮ ಹಳ್ಳಿಗಳ ಮತ್ತು ರೈತರ ಅವನತಿಗೆ ಇದೂ ಒಂದು ಕಾರಣವೆನ್ನಬಹುದು.

ರೈತರು ರಾಷ್ಟ್ರವೆಂಬ ಮನೆಗೆ ಕಂಬಗಳಿದ್ದಂತೆ. ಅವರು ಉಂಡು, ಉಟ್ಟು ತೃಪ್ತರಾದರೆ ಮಾತ್ರ ರಾಷ್ಟ್ರದ ಭವಿಷ್ಯ ಸುಗಮವಾಗಲು ಸಾಧ್ಯ. ಆದರೆ ಇಂದಿನ ನಿಜಸ್ಥಿತಿ ಹೀಗಿಲ್ಲ. ಇಂದು ನಮ್ಮ ಹಳ್ಳಿಗಳಲ್ಲಿ ಎಲ್ಲೆಲ್ಲೂ ಬಡತನದ ಬೇಗೆಯಿಂದ ಬೆಂದು ನಿಸ್ತೇಜರಾಗುತ್ತಿರುವ ರೈತರೇ ಕಾಣ ಬರುತ್ತಿದ್ದಾರೆ. ನಮ್ಮ ರೈತರಲ್ಲಿ ತಾನು, ತನ್ನ ಕುಟುಂಬ, ತನ್ನ ಸಮಾಜ, ತನ್ನ ದೇಶ ಇವುಗಳ ಬಗ್ಗೆ ಆಸಕ್ತಿ, ಅಭಿಮಾನಗಳು, ಮೂಡಬೇಕಾದರೆ ದೇಶವು ಆರ್ಥಿಕ ಪ್ರಗತಿಯತ್ತ ದಿಟ್ಟ ಹೆಜ್ಜೆಯನ್ನು ಇಡಬೇಕಾದರೆ ಮೊಟ್ಟ ಮೊದಲು ಮೂಲ ಭೂತವಾದ ಆಹಾರದ ಪೂರೈಕೆ ಸಾಕಷ್ಟು ಪ್ರಮಾಣದಲ್ಲಿ ಅವರಿಗೆ ದೊರೆಯಬೇಕು. ರಾಷ್ಟ್ರದ ಆರ್ಥಿಕ ಪ್ರಗತಿಯ ರಂಗಮಂಟಪದಲ್ಲಿ ಬಹು ಹಿರಿಯ ಪಾತ್ರವಹಿಸುವ ನಮ್ಮ ರೈತರು ದಾರಿದ್ರ್ಯದ ಪ್ರತಿ ರೂಪಗಳಂತಿದ್ದರೆ ಕೃಷಿಯ ಅಭಿವೃದ್ಧಿಯಾಗುವುದು ಹೇಗೆ. ? ದೇಶದ ಉದ್ಧಾರ ಎಂತು. ? ಆದ್ದರಿಂದ ಈ ದಿಸೆಯಲ್ಲಿ ನಮ್ಮ ಸರ್ಕಾರ



ರೈತರ ಸ್ಥಿತಿಯನ್ನು ಉತ್ತಮಗೊಳಿಸಬೇಕೆಂಬ ಘನ ಉದ್ದೇಶದಿಂದ ಗ್ರಾಮಾಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿದೆ. ಇದು ನಿಜಕ್ಕೂ ಶ್ಲಾಘನೀಯ. ಆದರೆ ಈ ಕಾರ್ಯಕ್ರಮಗಳಲ್ಲೂ ಅಸಮರ್ಪಕ ವ್ಯವಸ್ಥೆ ಇದ್ದು ಅನೇಕ ಕುಂದು ಕೊರತೆಗಳಿವೆ. ಅವುಗಳನ್ನು ನಿವಾರಣೆಗೊಳಿಸುವುದು ಅತಿ ಮುಖ್ಯವಾಗಿದೆ. ಈ ಕಾರ್ಯಕ್ರಮಗಳ ಫಲವಾಗಿ ನಮ್ಮ ದೇಶದಲ್ಲಿ ಕೃಷಿ ಕ್ಷೇತ್ರದಲ್ಲಿ ಕೆಲಮಟ್ಟಿಗೆ ಪ್ರಗತಿ ಕಂಡುಬಂದರೂ, ಅದು ಕೇವಲ ದೊಡ್ಡ ರೈತರಿಗೆ ಸಾಕಷ್ಟು ಪ್ರಮಾಣದಲ್ಲಿ ದೊರೆತಿದೆಯೇ ಹೊರತು ಸಣ್ಣ ರೈತರಿಗೆ ಏನೂ ಪ್ರಯೋಜನವಾಗಿಲ್ಲ. ಆರ್ಥಿಕ ಬೆಂಬಲವಿಲ್ಲದ ಅವರು ಇಂದು ಹಿಂದೆಯೇ ಉಳಿದಿದ್ದಾರೆ. ಇದರಿಂದಾಗಿಯೇ ಹಸಿರು ಕ್ರಾಂತಿಯ ಸಾಧನೆಯ ಬಗ್ಗೆ ನಮ್ಮ ರೈತರಲ್ಲಿ ತೀವ್ರ ಅತೃಪ್ತಿಯುಂಟಾಗಿದೆ. ಇಂದು ನಮ್ಮ ರೈತರಲ್ಲಿ ಶ್ರಮಪಟ್ಟು ಕೆಲಸ ಮಾಡಲು ಶಕ್ತಿ ಇದೆ. ದುಡಿಯುವ ಹುಮ್ಮಸ್ಸು-ಉತ್ಸಾಹಗಳು ಅಡಗಿವೆ. ಆದರೆ ಅವು ಅವರ ಆರ್ಥಿಕ ಅಭಿವೃದ್ಧಿಗೆ ವಿನಿಯೋಗವಾಗುತ್ತಿಲ್ಲದಿರುವುದು ದುರದೃಷ್ಟಕರ. ಅವರ ಬಡತನ ತೊಲಗಿ, ಅವರು ಶಕ್ತರೂ, ದಕ್ಷರೂ, ವಿದ್ಯಾವಂತರೂ ಬುದ್ಧಿವಂತರೂ ಆಗಿ, ನಮ್ಮ ಹಳ್ಳಿಗಳಲ್ಲಿ ಸುಭಿಕ್ಷ ನೆಲಸಿ, ನಮ್ಮ ದೇಶದ ಸಂಪತ್ತು ಬೆಳೆಯಬೇಕಾದರೆ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಸರ್ಕಾರದಷ್ಟೇ ಆಸಕ್ತಿಯನ್ನು ನಮ್ಮ ರೈತರೂ ತೋರಿಸಬೇಕು. ರಾಷ್ಟ್ರ ತಮ್ಮದು, ಅದರ ಪ್ರಗತಿಗಾಗಿ ದುಡಿಯುವುದು ತಮ್ಮ ಕರ್ತವ್ಯ ಎಂಬ ಮನೋಭಾವದಿಂದ ಶ್ರಮವಹಿಸಿ ದುಡಿಯಬೇಕು. ಆಗಲೇ ನಮ್ಮ ರಾಷ್ಟ್ರ ಹಾಗೂ ಬಡ ರೈತರು ಉದ್ಧಾರವಾಗಲು ಸಾಧ್ಯ. ನಮ್ಮ ರೈತರ ಅಭಿವೃದ್ಧಿಯ ಅಡಿಗಲ್ಲ ಮೇಲೆ ನಾಡಿನ ಅಭಿವೃದ್ಧಿ ನಿಂತಿದೆ. ಆದ್ದರಿಂದಲೇ ಇಂದು ತುರ್ತು ಪರಿಸ್ಥಿತಿಯನ್ನು ಘೋಷಿಸಲಾಗಿದ್ದು, ಸಣ್ಣ ರೈತರ, ರೈತ ಕೂಲಿಕಾರರ, ಭೂ ಹೀನರ ಆರ್ಥಿಕ ಅಭಿವೃದ್ಧಿಗಾಗಿ ಪ್ರಧಾನಿ ಇಂದಿರಾ ಗಾಂಧಿಯವರು 20 ಅಂಶಗಳ ಒಂದು ಯೋಜನೆಯನ್ನು ಪ್ರಕಟಿಸಿದ್ದು ಅದು ಈಗ ನಾಡಿನಾದ್ಯಂತ ಎಲ್ಲ ಹಂತಗಳಲ್ಲೂ ಜಾರಿಗೆ ಬರುತ್ತಲಿದೆ. ಇದರಿಂದ ರೈತರ ಆರ್ಥಿಕ, ಸಾಮಾಜಿಕ ಮತ್ತಿತರ ಸರ್ವತೋಮುಖ ಕಲ್ಯಾಣವಾಗುವುದು ಎಂದು ನಂಬಲಾಗಿದೆ.

ಈ 20 ಅಂಶಗಳ ಕಾರ್ಯಕ್ರಮದಲ್ಲಿ ಮೊದಲ ಹೆಜ್ಜೆ ಎಂದರೆ ಕೃಷಿ ಉತ್ಪಾದನೆಯಲ್ಲಿ ಹೆಚ್ಚಳ. ಇದಕ್ಕಾಗಿ ರೈತರಿಗೆ ಸಕಾಲದಲ್ಲಿ ಸಾಲ ಹಾಗೂ ಕೃಷಿಯ ಸಲಕರಣೆಗಳನ್ನು ಒದಗಿಸುವ ವ್ಯವಸ್ಥೆ ಮಾಡಲಾಗಿದೆ. ಉತ್ಪಾದನೆಯಿಂದಷ್ಟೇ ಸಮಸ್ಯೆ ಬಗೆ ಹರಿಯುವುದಿಲ್ಲ. ಆದ್ದರಿಂದ ಕೃಷಿ ಉತ್ಪಾದನೆಗಳ

(26 ನೇ ಪುಟ ನೋಡಿ)

---

## ಡಾ|| ಎಸ್. ರಾಧಾಕೃಷ್ಣನ್

6ನೇ ಪುಟದಿಂದ

ಅಮೇರಿಕಾದ ಪೆನ್ಸಿಲ್ವೇನಿಯಾ ವಿಶ್ವವಿದ್ಯಾಲಯ 'ಡಾಕ್ಟರ್ ಆಫ್ ಲಾಸ್' ಪ್ರಶಸ್ತಿ ನೀಡಿ ಗೌರವಿಸಿದ್ದರೆ, ಬ್ರಿಟೀಷ್ ಅಕಾಡೆಮಿ 'ಫೆಲೋಷಿಪ್' ನೀಡಿ ಸನ್ಮಾನಿಸಿತು. ಭಾರತ ಸರಕಾರ 'ಭಾರತ ರತ್ನ' ಪ್ರಶಸ್ತಿ ನೀಡಿ ಗೌರವಿಸಿತು.

ಭಾರತದಲ್ಲಿ ಜನಕನೇ ಮುಂತಾದ ಪ್ರಾಚೀನ ರಾಜರು ದಾರ್ಶನಿಕರಾಗಿದ್ದದು ಇತಿಹಾಸ ಪುಟಗಗಳಿಂದ ವ್ಯಕ್ತವಾಗುತ್ತದೆ. ಈ ಇಪ್ಪತ್ತನೆಯ ಶತಮಾನಗಳಲ್ಲೂ ದಾರ್ಶನಿಕ ರಾಧಾಕೃಷ್ಣನ್‌ರು ರಾಜಕಾರಣಿಯಾಗಿದ್ದುದು ಭಾರತದ ಪರಂಪರೆಗೆ ದ್ಯೋತಕ.

“ದೇವರ ಸಮಕ್ಕೆ ನಿಲ್ಲಬೇಕು. ಪರಿಸ್ಥಿತಿಯೊಡನೆ ಹೋರಾಡಬೇಕು. ಅನ್ಯಾಯವನ್ನು ಗೆಲ್ಲಬೇಕು. ಮಾನವ ಜೀವನವನ್ನು ಮೇಲೆತ್ತಬೇಕು. -ಇದು ರಾಧಾಕೃಷ್ಣರ ನಿಲುವಾಗಿತ್ತು.

(ದಿನಾಂಕ 29.8.76 ರಿಂದ 29.9.76ರ ವರೆಗೆ)

# ಮಾಸ ಭವಿಷ್ಯ

ಜ್ಯೋತಿಷ್ಯ ವಿದ್ವಾನ್
—ಎನ್. ವಿ. ಚನ್ನವೀರಶಾಸ್ತ್ರಿ

ಮೇಷ:—

೨ ನೇ ಗುರು– ಹಣದುಬ್ಬರ, ವ್ಯರ್ಥ ಪ್ರಯಾಣ, ಕಲಹ, ಮಾನಸಿಕ ಚಿಂತೆ, ೪ ನೇ ಶನಿ– ಬಂಧು ಸಮಾಗಮ, ಬುದ್ಧಿ ಕುಶಲತೆ, ಕಾರ್ಯಾನುಕೂಲ, ಪ್ರತಿಭೆ

ವೃಷಭ.—

೧ ನೇ ಗುರು– ಉತ್ಪಾದನೆಗೆ ತಡೆ, ಕಾರ್ಯ ವಿಳಂಬ, ಅನಾರೋಗ್ಯ, ಅಶಾಂತಿ. ೩ ನೇ ಶನಿ– ಕುಟುಂಬ ವೃದ್ಧಿ, ಬೇಸಾಯ, ವ್ಯಾಪಾರ, ವ್ಯಾಸಂಗ ಉತ್ತಮ.

ಮಿಥುನ:—

೧೨ ನೇ ಗುರು– ನಿಷ್ಠುರೋಕ್ತಿ, ಋಣಬಾಧೆ, ಸ್ತ್ರೀ ಚಿಂತೆ, ಖರ್ಚು, ಕಾರ್ಯವಿಘ್ನ. ೨ ನೇ ಶನಿ– ಕಳವಿನ ಭಯ, ಮಾರ್ಗಾಯಾಸ, ಅಧಿಕ ಖರ್ಚು, ಅತೃಪ್ತಿ.

ಕರ್ಕ:—

೧೧ ನೇ ಗುರು– ಆಹ್ವಾನ, ಧಣಿಗಳ ಮೆಚ್ಚಿಗೆ, ಗೌರವ, ಬಯಕೆ ಈಡೇರುತ್ತದೆ. ೧ ನೇ ಶನಿ– ಪ್ರಯಾಣ ತೊಂದರೆ, ಅನಾರೋಗ್ಯ, ಜವಾಬ್ದಾರಿ, ಅವಿಶ್ವಾಸ.

ಸಿಂಹ:—

೧೦ ನೇ ಗುರು– ಸ್ವಜನ ಬೆಂಬಲ, ಕಾರ್ಯ ಜಯ, ನ್ಯಾಯಮಾರ್ಗ, ಧನಾಗಮ. ೧೨ ನೇ ಶನಿ– ಮೇಲಧಿಕಾರಿಗಳ ಸಿಟ್ಟು, ಮಧ್ಯಸ್ತಿಕೆ, ಆಪಾದನೆ, ಸಾಲ, ಖರ್ಚು

ಕನ್ಯ:—

೯ ನೇ ಗುರು– ಧರ್ಮಕಾರ್ಯ, ವಿದ್ಯಾವೃದ್ಧಿ, ಬುದ್ಧಿವಂತಿಕೆ, ಗೊಂದಲ, ಕೀರ್ತಿ. ೧೧ ನೇ ಶನಿ– ವ್ಯಾಪಾರ, ಉದ್ಯೋಗ, ವ್ಯವಹಾರ, ಆರ್ಥಿಕ ವೃದ್ಧಿ.

ತುಲಾ:—

೮ ನೇ ಗುರು– ದಾರಿ ಅಪಘಾತ, ನಿಷ್ಠುರೋಕ್ತಿ, ಅನಾರೋಗ್ಯ, ವಿಕ್ರಯ. ೧೦ ನೇ ಶನಿ– ಪ್ರಯಾಣ, ಧಾನ್ಯ ಸಂಗ್ರಹ, ಮಾತೃ ಚಿಂತೆ, ಪಿತೃ ಸೌಖ್ಯ.

ವೃಶ್ಚಿಕ:—

೭ ನೇ ಗುರು– ಶುಭವಾರ್ತೆ, ಪತ್ರಾಗಮ, ತಾಂತ್ರಿಕಾನುಕೂಲ, ಕೀಟಭಯ. ೯ ನೇ ಶನಿ– ಸತ್ಕಾರ್ಯ ವಿಘ್ನ. ಮಾತು ತಪ್ಪುವುದು, ವ್ಯವಹಾರ ಉತ್ತಮ.

ಧನಸ್ಸು:—

೬ ನೇ ಗುರು– ವಿಶೇಷ ಭೋಜನ, ಪ್ರಯತ್ನ ನಡೆಯುತ್ತದೆ, ಶತೃದಮನ, ಸುಖ.
೮ ನೇ ಶನಿ– ಅಪಘಾತ, ಅನಾರೋಗ್ಯ, ಗುಪ್ತ ಚಿಂತೆ, ಧಣಿಕೋಪ, ವಿಘ್ನ.

ಮಕರ:—

೫ ನೇ ಗುರು– ಮೂಲಧನ, ಬುದ್ಧಿ ಕುಶಲತೆ, ಬಾಬುವಾರು ಧಕ್ಕೆ, ಗೌರವ, ಸನ್ಮಾನ. ೭ ನೇ ಶನಿ– ಆಪಾದನೆ, ಹಿನ್ನೆಲೆ ಕುತಂತ್ರ, ಚಾಡಿ, ಮನಸ್ಸಿಗೆ ಶಾಂತಿಯಿಲ್ಲ

ಕುಂಭ:—

೪ ನೇ ಗುರು– ಅಧಿಕಾರಿಗಳ ಭೇಟಿ, ಆರ್ಥಿಕ ಉತ್ತಮ, ಆಹ್ವಾನ, ಕಾರ್ಯಾನುಕೂಲ. ೬ ನೇ ಶನಿ– ಶತ್ರುಜಯ, ವ್ಯಾಪಾರ, ವ್ಯವಸಾಯಾದಿ ವೃದ್ಧಿ, ಹೊಸ ಏರ್ಪಾಟು

ಮೀನ:—

೩ ನೇ ಗುರು– ಅಕಸ್ಮಾತ್ ಘಟನೆ, ಹಣದುಬ್ಬರ, ಮಾತು ಅಸಫಲ, ಅಧೈರ್ಯ ೫ ನೇ ಶನಿ– ಬುದ್ಧಿಮಾಂದ್ಯ, ದೇಹಶೂಲೆ, ಚಿಕಿತ್ಸೆ, ಅಧಿಕ ಖರ್ಚು, ಸ್ಥಾನಭ್ರಂಶ. —

---

ಸಂಗ್ರಹ ಮತ್ತು ವಿತರಣೆಗೆ ಹೆಚ್ಚಿನ ಗಮನ ನೀಡಲಾಗಿದೆ. ಜೊತೆಗೆ ಸಾಹುಕಾರರು ಮತ್ತು ಮಧ್ಯವರ್ತಿಗಳ ಶೋಷಣೆಯಿಂದ ರೈತರನ್ನು ರಕ್ಷಿಸಲು ತೀವ್ರಕ್ರಮಗಳನ್ನು ಕೈಗೊಳ್ಳಲಾಗಿದೆ. ಭೂಸುಧಾರಣೆ ಕಾನೂನನ್ನು ತ್ವರಿತವಾಗಿ ಜಾರಿಗೆ ತರಲು ಈ ಕಾರ್ಯಕ್ರಮದಲ್ಲಿ ಅಗತ್ಯವಾದ ಕ್ರಮವನ್ನು ಕೈಗೊಳ್ಳಲಾಗಿದೆ. ಸಾಲದ ಬಾಧೆಯಿಂದ ನರಳುತ್ತಿರುವ ರೈತರನ್ನು ಬಿಡುಗಡೆ ಮಾಡಲು ಸಾಲದ ವಸೂಲಾತಿಯನ್ನು 2 ವರ್ಷ ತಡೆ ಹಿಡಿಯಲಾಗಿದೆ. ಹೀಗೆ ಈ ಕಾರ್ಯಕ್ರಮವು ರೈತರ ತೊಂದರೆಗಳನ್ನು ನಿವಾರಿಸುವಲ್ಲಿ ಸಂಜೀವಿನಿಯಾಗಿದ್ದು, ಅವರ ಕತ್ತಲೆಯ ಬಾಳಿಗೆ ಬೆಳಕನ್ನು ತೋರುವ ಹಿರಿಯ ಉದ್ದೇಶದಿಂದ ಇನ್ನೂ ಹಲವಾರು ಉದಾತ್ತ ಧ್ಯೇಯಗಳನ್ನು ಹೊಂದಿದೆ. ಇದರಿಂದ ರೈತರ ಆರ್ಥಿಕ ಕಲ್ಯಾಣವು ಸುಲಭ ಸಾಧ್ಯವಾಗಿ, ಭಾರತವು ಸ್ವಾವಲಂಬಿಯಾಗುವುದರಲ್ಲಿ ಸಂಶಯವಿಲ್ಲ. —



# 'ಸಿದ್ಧಗಂಗಾ'

## 'ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ'

185 ಶ್ರೀ ಸಿದ್ದಪ್ಪ,
ಬೆಣಚಿಗೆರೆ, ಗುಬ್ಬಿ ತಾ||

186 ಶ್ರೀ ಎಂ. ಬಸವಯ್ಯ,
ಸ್ಕೂಲ್ ಇನ್‌ಸ್ಪೆಕ್ಟರ್, ಗುಬ್ಬಿ

187 ಶ್ರೀ ವಿಶ್ವರಾಧ್ಯ S/o ಮರಿಯಪ್ಪಶಾಸ್ತ್ರಿಗಳು
ಗೋಡೆಕೆರೆ, ಚಿಕ್ಕನಾಯಕನಹಳ್ಳಿ ತಾ||

188 ಶ್ರೀ ಎಸ್. ಸಿದ್ಧಲಿಂಗಪ್ಪ,
ಅಮ್ಮನಘಟ್ಟ, ಗುಬ್ಬಿ ತಾ||

189 ಶ್ರೀ ರಂಗಪ್ಪ,
ಕಿಟ್ಟದಕುಪ್ಪೆ, ಗುಬ್ಬಿ ತಾ||

190 ಶ್ರೀ ಆರ್. ಬಸವಲಿಂಗಯ್ಯ,
ಪುರ ಗುಬ್ಬಿ ತಾ||

191 ಶ್ರೀ ಕೆ. ಎಸ್. ಶಿವಶಂಕರಯ್ಯ
ಸಂತೋಷ್ ಟೆಕ್ಸ್‌ಟೈಲ್, ತಿಪಟೂರು

192 ಶ್ರೀ ಹೆಚ್. ಎಸ್. ಗುರುಸಿದ್ದಪ್ಪ,
ಹಲಸಿನನಾಗೇನಹಳ್ಳಿ, ಗುಬ್ಬಿ ತಾ||

193 ಶ್ರೀ ಸಿ. ಗುರುಲಿಂಗಪ್ಪ,
ಸೋಪನಹಳ್ಳಿ, ಗುಬ್ಬಿ ತಾ||

194 ಶ್ರೀ ಜಿ. ಬಿ. ಸಿದ್ದರಾಮಯ್ಯ,
ಗೋಡೆಕೆರೆ, ಚಿಕ್ಕನಾಯಕನಹಳ್ಳಿ ತಾ||

195 ಜಿ. ಕೆ. ಚಿಕ್ಕಡವಪ್ಪ.
ಗಣಪತಿ ಆಯಿಲ್ ಮಿಲ್ಸ್, ಗುಬ್ಬಿ

196 ಶ್ರೀ ಎನ್. ಗಂಗಾಧರಯ್ಯ,
ಚಿಟ್ಟದಹಳ್ಳಿ, ಗುಬ್ಬಿ ತಾ||

197 ಶ್ರೀ ಕೆ. ಎಸ್. ಶ್ರೀಕಂಠಯ್ಯ,
ಕಗ್ಗೆರೆ, ತುಮಕೂರು ತಾ||

198 ಶ್ರೀ ಹೆಚ್. ವಿ. ಬಸವರಾಜಯ್ಯ.
ಎಸ್. ಆರ್. ಕಾಲೋನಿ, ತುಮಕೂರು

199 ಶ್ರೀ ಬಿ. ಡಿ. ರುದ್ರಪ್ಪ,
ಬಂಡಿಹಳ್ಳಿ, ಗುಬ್ಬಿ ತಾ||

200 ಶ್ರೀ ಪಿ. ಎನ್. ನಂಜುಂಡಯ್ಯ,
ಪುರ, ಗುಬ್ಬಿ ತಾ||

201 ಶ್ರೀ ಕೆ. ವಿ. ನಟರಾಜ್,
ದಾಸರಹಳ್ಳಿ, ಬೆಂಗಳೂರು–39

202 ಶಾಂತಕುಮಾರಿ,
ಸಿದ್ಧಗಂಗಾಸೈನ್ಸ್ ಕಾಲೇಜ್; ತುಮಕೂರು

203 ಹೆಚ್. ವಿ. ಶಿವರುದ್ರಮ್ಮ,
ಸಿದ್ಧಗಂಗಾಸೈನ್ಸ್ ಕಾಲೇಜ್, ತುಮಕೂರು

204 ಶ್ರೀ ಎನ್. ಪುಟ್ಟಸಿದ್ದಯ್ಯ ಅಂಡ್ ಸನ್ಸ್
ಗಾಂಧಿನಗರ, ತುಮಕೂರು

205 ಶ್ರೀ ಜಿ. ಸಿ. ಕುಮಾರಸ್ವಾಮಿ,
ಗಾಣದಾಳು, ಚಿಕ್ಕನಾಯಕನಹಳ್ಳಿ ತಾ||

206 ಶ್ರೀ ಡಿ. ಎಸ್. ಸುರೇಂದ್ರಶೆಟ್ಟಿ,
ಕೃಷ್ಣಾಸ್ಟೋರ್ಸ್, ಕನಕಪುರ

207 ಶ್ರೀ ಚಿಕ್ಕೇಗೌಡ,
ಎ. ಪಿ. ಎಂ. ಸಿ, ತುಮಕೂರು

208 ಶ್ರೀ ಬಿ. ಎಲ್. ಗುರುಪ್ರಕಾಶ್
ಬಾಳ್ಳುಪೇಟೆ, ಹಾಸನಜಿಲ್ಲೆ

[ಮುಂದುವರಿಯುವುದು]

'SIDDAGANGA' Monthly, Sree Siddaganga Mutt. KRN Q-9.
Registered with the Registrar of News papers for India under No. 17139/69



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.